


# ಸಿದ್ಧಗಂಗಾ




ಸಂಚಿಕೆ ೧

೧೯೬೭






M.C.Veer

# ಸಿದ್ಧಗಂಗಾ

(ತ್ರೈಮಾಸಿಕ)

ಸಂಚಿಕೆ ೨

೧೯೬೭



## ವಿನಮ್ರ ಪ್ರಾರ್ಥನೆ



ಮಹಾಶಯರೇ,

"ಸಿದ್ಧಗಂಗಾ ತ್ರೈಮಾಸಿಕದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿ ಪ್ರಥಮ ವರ್ಗದ ಪತ್ರಿಕೆಯನ್ನಾಗಿ ಮಾಡಲು ವಾಚಕವೃಂದದ ಹಾಗೂ ಜನತೆಯ ವಿಶೇಷ ಆರ್ಥಿಕ ನೆರವನ್ನು ಆಶಿಸಿದ್ದೇವೆ.

ಪತ್ರಿಕೋದ್ಯಮದ ಯಶಸ್ಸಿಗೆ ಸ್ವಂತ ಮುದ್ರಣಾಲಯ, ವಿಚಾರಪೂರಿತ ಲೇಖನಗಳೂ ಅತ್ಯಗತ್ಯ. ಇದಕ್ಕಾಗಿ ಈ ಕೆಳಕಂಡಂತೆ ಆರ್ಥಿಕ ಸಹಾಯವನ್ನು ತಮ್ಮಿಂದ ಬಯಸಿದ್ದೇವೆ.

1) 200 ರೂ. ಮೇಲೆ ನೀಡುವವರು—ಪೋಷಕರು
2) 150 ರೂ. ಕೊಡುವವರು — ಪ್ರೋತ್ಸಾಹಕರು
3) 100 ರೂ. ಕೊಡುವವರು — ಸಹಾಯಕರು
4) 51 ರೂ. ಕೊಡುವವರು — ಹಿತೈಷಿಗಳು

ಹೀಗೆ ಆದರಪೂರ್ವಕವಾಗಿ ಧನಸಹಾಯ ಮಾಡುವ ಮಹನೀಯರ ಹೆಸರುಗಳನ್ನು ಪತ್ರಿಕೆಯಲ್ಲಿ ಕೃತಜ್ಞತಾಪೂರ್ವಕವಾಗಿ ಸ್ಮರಿಸಿ ಪ್ರಕಟಿಸಲಾಗುವುದು.

ಪ್ರಪ್ರಥಮವಾಗಿ ತುಮಕೂರಿನ ಶ್ರೀ ಸಿದ್ಧಗಂಗಾ ಹೈಸ್ಕೂಲಿನ ಶಿಕ್ಷಕರೂ, ಉತ್ತಮ ಬರಹಗಾರರೂ ಆದ ಶ್ರೀ ಬಿ. ಎಸ್. ಮಂಜುನಾಥ್ ಎಂ.ಎಸ್.ಸಿ.,ಬಿ.ಇಡಿ. ರವರು 200 ರೂಪಾಯಿಗಳ ಧನಸಹಾಯ ಮಾಡುವುದರ ಮೂಲಕ ಪತ್ರಿಕೆಯ ಪೋಷಕರಾಗಲು ಒಪ್ಪಿರುವುದನ್ನು ಪ್ರಕಟಿಸಲು ನಮಗೆ ಅತೀವ ಹೆಮ್ಮೆ.

ಎರಡನೆಯದಾಗಿ ಸಹೃದಯರೂ, ಹಿತೈಷಿಗಳೂ, ಆದ ಕಂಟ್ರಾಕ್ಟರ್ ಸಿ. ರಾಜಣ್ಣ, ಬೆಂಗಳೂರು ಅವರು ಪತ್ರಿಕೆಯ ಪುರೋಭಿವೃದ್ಧಿಗಾಗಿ 200 ರೂ ಗಳ ಧನಸಹಾಯವಿತ್ತು ಪೋಷಕರಾಗಲು ಒಪ್ಪಿರುವುದಕ್ಕೆ ಸಂಘವು ಅತೀವ ಸಂತೋಷಪಡುತ್ತದೆ.

## ಸಿದ್ಧಗಂಗಾ

ಸಂಪಾದಕರು :
ಸಂ। ವಿ। ಟಿ. ವಿ. ಮುತ್ತಾಚಾರ್ಯ, ಬಿ.ಎ. (ಆನರ್ಸ್) ಬಿ.ಇಡಿ.
ಉಪ-ಸಂಪಾದಕರು :
ಪಂಡಿತ್ ಕೆ. ಪಿ. ಶಿವಲಿಂಗಯ್ಯ, ಬಿ.ಎ.,
ಹೆಚ್. ವಿ. ವೀರಭದ್ರಯ್ಯ, ಎಂ.ಎ.,
ರಾಜೀವಲೋಚನ, ಎಂ.ಎ
ಕೆ. ಜಿ. ರಂಗಯ್ಯ, ಬಿ.ಎ.,
ಪ್ರಕಾಶಕರು :
ಹಳೆಯ ವಿದ್ಯಾರ್ಥಿ ಸಂಘ, ಶ್ರೀ ಸಿದ್ಧಗಂಗಾ
ಮುದ್ರಕರು :
ಟಿ. ಬಿ. ಧರಣೇಂದ್ರಯ್ಯ,
ಪೃಥ್ವಿ ಪ್ರಿಂಟರ್ಸ್, ಬಳೇಪೇಟೆ, ಬೆಂಗಳೂರು-2
ಪತ್ರಿಕೆ ಹೊರಡುವ ಸ್ಥಳ :
ಶ್ರೀ ಸಿದ್ಧಗಂಗಾ ಕ್ಷೇತ್ರ
ಪತ್ರಿಕೆ ಹೊರಡುವ ಮಾಸಗಳು :
ಜನವರಿ
ಏಪ್ರಿಲ್
ಜುಲೈ
ಅಕ್ಟೋಬರ್

## ಲೇಖಕರಲ್ಲಿ ವಿನಂತಿ

"ಸಿದ್ಧಗಂಗಾ" ಪತ್ರಿಕೆಗೆ ಮಾನ್ಯ ಲೇಖಕರಿಂದ ಸಾಹಿತ್ಯದ ವಿವಿಧ ಪ್ರಕಾರಗಳ ಲೇಖನಗಳನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಲಾಗುವುದು. ತಮ್ಮ ಹೆಸರು, ವಿಳಾಸಗಳ ಸಹಿತ ಕಾಗದದ ಒಂದು ಮಗ್ಗಲು, ಲೇಖನಗಳನ್ನು ಸ್ಪಷ್ಟವಾಗಿ ಬರೆದು ಕಳುಹಿಸಲು ಪ್ರಾರ್ಥನೆ. ಧರ್ಮ, ಸಂಸ್ಕೃತಿ, ಕಲೆ, ಸಾಹಿತ್ಯ, ವಿಜ್ಞಾನ, ಶಿಕ್ಷಣ ಮುಂತಾದ ವಿಚಾರಗಳನ್ನೊಳಗೊಂಡ ಲೇಖನಗಳಿಗೆ ಮಾನ್ಯತೆ ಹೆಚ್ಚು. ಲೇಖಕರು ತಮ್ಮಲ್ಲಿ ಲೇಖನದ ಪ್ರತಿಯನ್ನು ಕಾಯ್ದಿಟ್ಟುಕೊಳ್ಳಲು ಪ್ರಾರ್ಥನೆ. ಲೇಖನಗಳನ್ನೂ, ವಿಮರ್ಶೆಗೆ ಗ್ರಂಥಗಳನ್ನೂ, ವಿನಿಮಯಕ್ಕೆ ಪ್ರತಿಗಳನ್ನೂ ಸಂಪಾದಕರ ವಿಳಾಸಕ್ಕೆ ದಯವಿಟ್ಟು ಕಳುಹಿಸಬೇಕು.

# ಈ ಸಂಚಿಕೆಯಲ್ಲಿ





ಶ್ರೀ ಕ್ಷೇತ್ರದಲ್ಲಿ ವಿದ್ಯಾರ್ಥಿ ಸಂಘಗಳ ಉದ್ಘಾಟನಾ ಸಮಾರಂಭಕ್ಕೆ ಆಗಮಿಸಿದ್ದ
ಮಾನ್ಯ ಅತಿಥಿಗಳಾದ, ವಾರ್ತಾ ಹಾಗೂ ಪ್ರವಾಸೋದ್ಯಮ ಸಚಿವರಾದ
ಶ್ರೀ ಡಿ. ದೇವರಾಜ್ ಅರಸ್‌ರವರು ಶ್ರೀ ಶ್ರೀಗಳವರೊಡನೆ.

ಶ್ರೀವಾಣಿ

# ನಮ್ಮ ಸಂಸ್ಕೃತಿ ಮತ್ತು ಯೋಜನೆ

ಇಂದು ಇಡಿಯ ವಿಶ್ವವೇ ಭಾರತದತ್ತ ನೋಡುತ್ತಿದೆ. ಮನುಷ್ಯ ಮನುಷ್ಯನಾಗಿ ಬಾಳುವ ಕಲೆಯನ್ನು ಜಗತ್ತಿಗೆ ತೋರಿಸಿ ಕೊಟ್ಟವರು ನಮ್ಮ ಪೂರ್ವಜರು. ಮಾನವ ಕುಲವೆಲ್ಲ ಈ ಕಲಾವಿದರಿಗೆ ಋಣಿಯಾಗಿರಲೇ ಬೇಕು.

ಒಮ್ಮೆ ಸ್ವಾಮಿ ರಾಮತೀರ್ಥರು "ಆಧುನಿಕ ವಿಚಾರಸರಣಿ, ವಿಜ್ಞಾನದ ಅದ್ಭುತ ಸಂಶೋಧನೆ-ಇವು ನಮ್ಮ ಅತ್ಯಂತ ಪ್ರಾಚೀನ ಗ್ರಂಥವಾದ "ಯೋಗ ವಾಸಿಷ್ಠ"ದ ಅಲ್ಲಲ್ಲಿಯ ಕುರುಹು ಮಾತ್ರ. ನೀವು ಅದನ್ನು ಸರಿಯಾಗಿ ಮನನ ಮಾಡಿಕೊಳ್ಳಲಾಗಿಲ್ಲ" —ಎಂದರಂತೆ.

ವಿಶ್ವಶಾಂತಿ ನೆಲೆಸಿ, ವಿಶ್ವ ಉಳಿದು ಚೆನ್ನಾಗಿ ಬಾಳಬೇಕಾದರೆ ಭಾರತೀಯ ಸಂಸ್ಕೃತಿ ಪ್ರಫುಲ್ಲಿತವಾಗಿ ಬೆಳೆಯಬೇಕು. ಅದಕ್ಕಾಗಿ ಭಾರತೀಯರಾದ ನಾವು ನಮ್ಮ ನಿಜಸ್ವರೂಪವನ್ನು ಅರ್ಥಮಾಡಿಕೊಳ್ಳಬೇಕು. "ಭಾರತಕ್ಕೆ ಬಂದ ಸ್ವಾತಂತ್ರ್ಯ ಅರ್ಧ – ಪೂರ್ಣ ವಾದುದು. ಜಗತ್ತಿನ ಧಾರ್ಮಿಕ, ಆರ್ಥಿಕ, ರಾಜಕೀಯ, ಸಾಮಾಜಿಕ, ನೈತಿಕ, ಆಧ್ಯಾತ್ಮಿಕ....ಎಲ್ಲ ರೀತಿ ಯಿಂದಲೂ ಅದು ಪ್ರಗತಿದಾಯಕವಾದ ಶುಭ ಸೂಚನೆ" —ಎಂದಿದ್ದಾರೆ ಅರವಿಂದರು.

ಆದರೆ ಇತ್ತೀಚಿನ ನಮ್ಮ ವರ್ತನೆಯಿಂದ ನಾವು ನಾಚಬೇಕಾದ ಪ್ರಸಂಗ ಬಂದಿದೆ ಮಹಾತ್ಮಾ ಗಾಂಧೀಜಿಯವರಂತಹ ಪುಣ್ಯ ಮೂರ್ತಿ ನಮ್ಮ ಕಣ್ಣ ಮುಂದೆ ಆಗಿಹೋಗಿರುವಾಗ, ಸ್ವಾತಂತ್ರ್ಯವನ್ನು ದೊರಕಿಸಿ ಕೊಟ್ಟಿರುವಾಗ ನಾವು ಪ್ರಯತ್ನ ಶೀಲರಾಗಿಲ್ಲ ವಲ್ಲ-ಎಂಬ ನಿರಾಶೆಯುಂಟಾಗಿದೆ.

ನಮ್ಮ ಯೋಜನೆಗಳಾದರೂ ಕೊಂಚಮಟ್ಟಿಗೆ ಫಲ ಕೊಟ್ಟಿವೆಯೆಂಬುದು ನಿಜ. ಆದರೆ ಪರದೇಶದವ ರಿಂದ ಎರವಲಾಗಿ ತಂದಿರುವ ಹಣಕ್ಕೆ ಬಡ್ಡಿಯ ರೂಪ ದಲ್ಲಿ ನಮ್ಮ ಫಲವನ್ನೆಲ್ಲಾ ತೆರಬೇಕಾಗಿದೆ. ಈ ರೀತಿಯ ಯೋಜನೆಗಳಿಂದೇನು ಪ್ರಯೋಜನ?

ಮೂಲ ಭೂತವಾದ ಶಕ್ತಿಯನ್ನು ಕೊಡತಕ್ಕದ್ದು ಯಾವುದು? ಎಂಬ ವಿಚಾರವನ್ನು ಚೆನ್ನಾಗಿ ಯೋಚಿಸ ಬೇಕು. ನಿದರ್ಶನಕ್ಕೆ ಬೇಲೂರು-ಹಳೆಯಬೀಡು ಶಿಲ್ಪ ಕಲೆಯನ್ನು ತೆಗೆದುಕೊಳ್ಳೋಣ. ಅದು ಇಡಿಯ ವಿಶ್ವವನ್ನೇ ಆಕರ್ಷಿಸಿದೆ. ಅಲ್ಲಿ ಅಂದು ಕೆಲಸ ಮಾಡಿದ ಕಲಾವಿದರ ಕಲಾಪ್ರೇಮ, ದೇಶಾಭಿಮಾನ, ಶ್ರದ್ಧಾ ಸಕ್ತಿಗಳು ಅಷ್ಟು ಮೇಲ್ಮಟ್ಟದ ಫಲ ದೊರಕಲು ಕಾರಣ. ಅಂತಹ ಉತ್ತಮ ಕಾರ್ಯ ಬರಿಯ ಹಣದಿಂದ ಆಗತಕ್ಕುದಲ್ಲ; ಆದುದೂ ಅಲ್ಲ. ಆದ್ದರಿಂದ ಯೋಜನೆ ಗಳಿಂದರೂ ಹೆಚ್ಚು ಹಣ ವ್ಯಯವಾಗದೆ, ಕಡಿಮೆ ವೆಚ್ಚದಲ್ಲಿಯೇ ಉತ್ತಮ ಫಲವೀಯುವಂಥವು ಆಗಿರಬೇಕು.

ಜನತಾ ಶಕ್ತಿ ಹಣದ ಬಲಕ್ಕಿಂತ ಸಹಸ್ರ ಪಾಲು ಮೇಲು. ಆ ಶಕ್ತಿ ಜಾಗ್ರತವಾದಾಗ ವಾಸ್ತವವಾಗಿ ಅತ್ಯುತ್ತಮ ಫಲ ದೊರಕುತ್ತದೆ. ಆ ವಿಷಯದಲ್ಲಿ

ಜನರಿಗೆ ಗೌರವ ಬುದ್ಧಿಯುಂಟಾಗುವ ವ್ಯವಸ್ಥೆ ಯಾದರೇನೇ ಯಾವುದೇ ಯೋಜನೆ ಯಶಸ್ವಿಯಾದೀತು. ಉತ್ತಮರ ತಂಡ ಉದಯವಾಗಬೇಕಾದರೆ, ಮತ್ತೊಮ್ಮೆ ನಾವು ಜಾಗೃತರಾಗುವ ಪ್ರಯತ್ನ ನಡೆಯಬೇಕು.

ಹೀಗೆ ಆಗಬೇಕಾದರೆ, ದೊಡ್ಡವರ ಸಂದೇಶವನ್ನು ಕೇಳಿ, ಅರಿತು ಅಂತೇ ನಡೆಯಬೇಕು. ಅಂತಹ ಮಹಾನುಭಾವರ ಪಙ್ತಿಯಲ್ಲಿ ಬಸವಣ್ಣನವರೂ ಒಬ್ಬರು. "ಪ್ರತಿಯೊಬ್ಬ ವ್ಯಕ್ತಿಯೂ ಸಾಮಾನ್ಯ ಮಟ್ಟವನ್ನು ಮೀರಿ ಉತ್ತಮನಾಗಬಲ್ಲ–ಮೇಲ್ಮಟ್ಟ ಮುಟ್ಟಬಲ್ಲ–" ಎನ್ನುವ ಭರವಸೆಯನ್ನು ಕೊಟ್ಟವರು ಅವರು. ನಮ್ಮಲ್ಲಿರುವ ಸುಪ್ತ ಶಕ್ತಿಯನ್ನು ಚೇತನಗೊಳಿಸಲು ಅಂತಹ ಲೋಕೋದ್ಧಾರಕರ ಬೋಧೆ ಅತ್ಯಗತ್ಯ.

[ ಶ್ರೀ ಕ್ಷೇತ್ರದಲ್ಲಿ ಸಮಾವೇಶಗೊಂಡಿದ್ದ 'ಸತ್ಯಶಿ–ಸಮೀಕ್ಷಾ ಗೋಷ್ಠಿ'ಯ ದ್ವಿತೀಯ ಸಭೆಯಲ್ಲಿ ಪರಮ ಪೂಜ್ಯ ಶ್ರೀ 'ಗುರುದೇವ'ರು ಅನುಗ್ರಹಿಸಿದ ಆಶೀರ್ವಚನದ ಸಾರಾಂಶ. *By Courtesy of the Sameeksha Goshthi. Bangalore.*—ಸಂಪಾದಕ ಮಂಡಲಿ. ]





---

# ಅಮೃತವಾಣಿ

ಪ್ರಾಣಿಗಳಿಗೆ ಮನುಷ್ಯ ಜನ್ಮವು ಕಷ್ಟಸಾಧ್ಯವಾದುದು. ಮನುಷ್ಯ ಜನ್ಮಕ್ಕಿಂತಲೂ ಪುರುಷತ್ವವು ದುರ್ಲಭವು. ಪುರುಷತ್ವಕ್ಕಿಂತಲೂ ಬ್ರಾಹ್ಮಣತ್ವವು ದುರ್ಲಭವು. ಬ್ರಾಹ್ಮಣತ್ವಕ್ಕಿಂತಲೂ ವೈದಿಕ ಧರ್ಮ ಮಾರ್ಗದಲ್ಲಿ ವಿಶ್ವಾಸವು ದುರ್ಲಭವು, ಇದಕ್ಕಿಂತಲೂ ಶಾಸ್ತ್ರ ಪಾಂಡಿತ್ಯವು ಅಧಿಕವಾದುದು. ಆತ್ಮ, ಅನಾತ್ಮ ಇವುಗಳ ವಿಚಾರ, ಸ್ವಾತ್ಮಾನುಭವ. ಬ್ರಹ್ಮಾತ್ಮ ಭಾವದಲ್ಲಿರುವುದು. (ಇವು ಕ್ರಮವಾಗಿ ಒಂದಕ್ಕಿಂತ ಒಂದು ಅಧಿಕವಾದುವು). ಇಂಥ ಮೋಕ್ಷವು ನೂರು ಕೋಟಿ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯವಲ್ಲದೆ ಲಭಿಸುವುದಿಲ್ಲ.

ಭಗವಂತನ ಅನುಗ್ರಹವೇ ಕಾರಣವಾಗಿರುವ ಈ ಮೂರು ಕಷ್ಟ ಸಾಧ್ಯವೇ: ಮನುಷ್ಯ ಜನ್ಮ, ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆ ಮತ್ತು ಮಹಾತ್ಮರ ಸಂಗ.

[ಶಂಕರಾಚಾರ್ಯರು.

ವೇದದಲ್ಲಿ

# ಸೃಷ್ಟಿ ನಿರೂಪಣೆ

(From Essays on Indo-Aryan Mythology
by B. Narayana Aiyangar, 1898 Edition)

: ಅನುವಾದ :

**ನಾ. ಭಾ. ಚಂದ್ರಶೇಖರಾಚಾರ್ಯ,** ಮಂಡ್ಯ; ಇವರಿಂದ

ವೇದಗಳು ಸೃಷ್ಟಿಯನ್ನು ನಿರೂಪಿಸುವಂದು ಸೃಷ್ಟಿಕರ್ತನನ್ನು ಪ್ರಥಮ ಯಜ್ಞಕರ್ತನನ್ನಾಗಿಯೂ; ಕವಿ-ಜನಕನನ್ನಾಗಿಯೂ ತೋರಿಸಿರುತ್ತವೆ. ಅಲ್ಲಿ ನಿರೂಪಿಸಲ್ಪಟ್ಟಿರುವ ಸೃಷ್ಟಿ ವಿಧಾನವು ಯಜ್ಞಾತ್ಮಕವಾದುದು, ಧಾರ್ಮಿಕವಾದುದು, ನೀತಿ ಪ್ರಧಾನವಾದುದು ಮತ್ತು ಆಧ್ಯಾತ್ಮಿಕತೆಯಿಂದ ಕೂಡಿದುದು. ಸೃಷ್ಟಿಯೆಂದರೆ ಇಲ್ಲಿ 'ಮುಂದಕ್ಕೆ ಕಳುಹಿಸಿದುದು' ಎಂದು ಅರ್ಥ.

ಋಗ್ವೇದವು ಹೇಳುತ್ತದೆ :- ಸುಕೃತಿಗಳು ಎಂದರೆ ಒಳ್ಳೆಯದನ್ನು ಮಾಡಿದವರು ಯಮ ಮತ್ತು ಆತನ ತಂದೆಯ ಲೋಕಕ್ಕೆ ಹೋಗುವರು ; ಸೋಮಪಾನ ಮಾಡಿದವರು ಅಮರರಾಗುತ್ತಾರೆ; ಅವರು ಸೂಕ್ಷ್ಮವಾದ ಸ್ವರ್ಗೀಯ ಸ್ಥಿತಿಯಲ್ಲಿ ದೇವರುಗಳಲ್ಲಿಗೆ ಹೋಗುತ್ತಾರೆ, ಎಂದು. ಹೀಗೆ ವೈದಿಕ ಋಷಿಗಳು ಆತ್ಮದ ಅವಿನಾಶಿತ್ವದಲ್ಲಿ ಸಂಪೂರ್ಣ ನಂಬುಗೆಯನ್ನಿಟ್ಟಿದ್ದರು. ಮನುಷ್ಯನು ತನ್ನ ಬಗ್ಗೆ ಹೇಳಿಕೊಳ್ಳುವ 'ಅಹಂ', ಅಥವಾ ಆತ್ಮಾ, ನಾನು, ತಾನು ಎಂಬುದು ಇಲ್ಲಿಯೇ ಸ್ಥೂಲ ಶರೀರದೊಂದಿಗೆ ನಾಶವಾಗುವುದಿಲ್ಲ. ಮೇಲೆ ಹೇಳಿದಂತೆ ಸ್ವರ್ಗಕ್ಕೆ ಹೋಗಬೇಕಾದರೆ ಈ ಅಹಂ ಎಂಬುದು 1) ಬಹಳ ಸೂಕ್ಷ್ಮವಾಗಿರಬೇಕು ; ಮತ್ತು ಅದು 2) ಮನುಷ್ಯನಲ್ಲಿರುವ ಒಂದು ಉತ್ತಮಾಂಶವಾಗಿರಲೇಬೇಕು. ಒಂದು ದೃಷ್ಟಿಯಲ್ಲಿ ಅದು ಅವನ ಯೋಚನಾ ಸಾಮರ್ಥ್ಯ. ಅದಿಲ್ಲದೆ ಅವನನ್ನು ಮನುಷ್ಯನೆನ್ನಲಾಗುವುದಿಲ್ಲ; ಮನುಷ್ಯ ಎಂಬ ಮಾತೇ 'ಮನ-ಆಲೋಚನೇ' ಎಂಬ ಧಾತುವಿನಿಂದ ಹುಟ್ಟಿರುವುದು. ಆದ್ದರಿಂದ ಯಾವುದು ಯೋಚಿಸುವುದೋ ಅದೇ ಅವಿನಾಶಿಯಾದ 'ಅಹಂ'.

ಮನುಷ್ಯನ ಅಹಮ್ಮಿನ ಮತ್ತೊಂದು ರೂಪವೆಂದರೆ ಅದು ಅವನ ಸಂಕಲ್ಪ ಶಕ್ತಿ. ಮನುಷ್ಯನಲ್ಲಿರುವ ಆ ಅಹಂ ತನ್ನ ವಿನಾಶವನ್ನೊಪ್ಪುವುದಿಲ್ಲ. ತಾನು ಶಾಶ್ವತನೆಂದೇ ತಿಳಿಯುತ್ತದೆ. ಅದರ ಸ್ವಭಾವದಲ್ಲೇ ನಿಹಿತನಾಗಿರುವ ಈ ಹುಮ್ಮಸ್ಸಿನಿಂದ ತಾನು ಸಂಪೂರ್ಣ ತೃಪ್ತಿಯನ್ನು ಪಡೆಯಲು, ತಾನು ಸರ್ವವ್ಯಾಪಿಯಾಗುವ ಮೊದಲು, ಎಲ್ಲವನ್ನೂ ತಿಳಿಯಲು ಆಶಿಸುತ್ತದೆ. ಯೋಚನಾ ತತ್ವವಾಗಿ ಅದಕ್ಕಿರುವ ಒಂದೇ ಒಂದು ಗ್ರಾಸ ಅಥವಾ ಭೋಗ ಸಾಧನವೆಂದರೆ ಸಮಗ್ರ ಸತ್ಯವನ್ನು ತಿಳಿಯುವುದು. ತಾನಿರುವ ಶರೀರವು ತನ್ನ ಸುತ್ತ ಮುತ್ತ ಕಾಣುವ ಅಗಾಧ ವಸ್ತುಗ

ಳೊಡನೆ ಹೋಲಿಸಿದರೆ ಸಣ್ಣದೆಂಬುದೇನೋ ನಿಜವೇ. ಆದರೆ ಹಾಗೆ ಕಾಣುವ ಮಹಾ ಪರ್ವತಗಳು, ದ್ವೀಪಗಳು, ಖಂಡಗಳು, ನದಿಗಳು, ಸಮುದ್ರಗಳು, ಪಟ್ಟಣಗಳು, ಅಸಂಖ್ಯಾತ ಗ್ರಹತಾರೆಗಳಿಂದ ನಿಬಿಡವಾಗಿರುವ ಗಂಭೀರ ನೀಲಾಕಾಶ, ಅವುಗಳಲ್ಲಿ ಒಂದರಿಂದ ಇನ್ನೊಂದಕ್ಕಿರುವ ಅಗಾಧ ದೂರ ಇವೆಲ್ಲವೂ ಮತ್ತು ಇರುವ ಇತರ ಸೂಕ್ಷ್ಮ ವಸ್ತುಗಳೂ ಸಹ, ಅವುಗಳನ್ನು ಅವನು ನೋಡಿದ ಕೂಡಲೇ ಅಥವಾ ಗ್ರಹಿಸಿದ ಕೂಡಲೇ ಅವನ ಮನಸ್ಸನ್ನು ಹೊಗುತ್ತವೆ ಮತ್ತು ಅಲ್ಲಿ ನಿಲ್ಲುತ್ತವೆ–ಅವುಗಳನ್ನು ಅಮುಕಿದ ರೂಪದಲ್ಲಿಲ್ಲ, ಅವುಗಳು ಯಾವ ರೂಪದಲ್ಲಿರುವುವೋ ಅದೇ ರೂಪದಲ್ಲಿ ಪೂರ್ತಿಯಾಗಿ, ನಿಷ್ಕೃಷ್ಟವಾಗಿ ಕರಾರುವಾಕ್ಕಾಗಿ ಆ ಮನದಲ್ಲಿ ನಿಲ್ಲುವುವು. ಇವುಗಳೆಲ್ಲವನ್ನೂ, ಇವುಗಳನ್ನು ಕಾಣದಿರುವವರಿಗೆ ವಿವರಿಸುವಾಗ, ಆ ಅಹಂ, ಮನೋರೂಪದಲ್ಲಿ, ಮಾತುಗಳ ಮುಖಾಂತರ, ತನ್ನಿಂದ ಹೊರಟ ಪ್ರವಾಹದಂತೆ, ಕೇಳುವವರ ಮನಸ್ಸುಗಳನ್ನು ಹೊಗುವಂತೆ ಮಾಡುತ್ತದೆ. ಹೀಗೆ ಇದಕ್ಕೆ ಗ್ರಹಿಸುವ ಮತ್ತು ತುಂಬುವ ಎರಡು ಶಕ್ತಿಗಳೂ ಇರುತ್ತವೆ. ಆದ್ದರಿಂದ ಆ ಅಹಂ ಈ ಸ್ಥೂಲ ಶರೀರದಷ್ಟು ಮಾತ್ರ ಇದೆಯೆಂದು ಹೇಗೆ ಹೇಳಲಾದೀತು ? ಅದು ಸಹಸ್ರಾರು ಪುಟಗಳನ್ನುಳ್ಳಂತಹ ಗ್ರಂಥಗಳನ್ನು ಸಂಗ್ರಹಿಸಿ, ತನ್ನಲ್ಲಿಟ್ಟುಕೊಂಡಿದ್ದು ಸಮಯ ಬಂದಾಗ ಅದನ್ನು ಹೊರಬಿಡುವ ಕಣಿಯಂತೆ, ತಾನು ಸಹಸ್ರಾರು ಮಡಿಕೆಗಳಲ್ಲಿದ್ದು, ವ್ಯಯವೇ ಆಗದಂತಹ ರೀತಿಯಲ್ಲಿ ಹೊರಕ್ಕೆ ಬರಬಲ್ಲದು. ಇರುವೆಯದರಂಥ ಸಣ್ಣ ಶರೀರದಲ್ಲಿರುವ ಅಹಂ ಕೂಡ ಗುಂಪು ಸೇರಬಲ್ಲುದು, ರಾಶಿ ಕೂಡಿಸಬಲ್ಲುದು, ಅಡ್ಡಿ ಆತಂಕಗಳನ್ನು ನಿವಾರಿಸಬಲ್ಲುದು, ಎಷ್ಟುದೂರ ಬೇಕಾದರೂ ಹೋಗಬಲ್ಲುದು, ಎಷ್ಟು ಚಿಕ್ಕ ಶರೀರದಲ್ಲಾದರೂ ಸೇರಿಸಬಹುದಾದಷ್ಟು ಸೂಕ್ಷ್ಮವಾಗಿದ್ದರೂ, ಈ ಅಹಂ ಸ್ವರ್ಗಪಾತಾಳಗಳನ್ನೇ ನುಂಗುವಷ್ಟು ದೊಡ್ಡದಾಗಿಯೂ ಇರುತ್ತದೆ.

ದುರ್ದೈವದಿಂದ ಸ್ಥೂಲ ಶರೀರದ ಸಹವಾಸವು ಇದಕ್ಕೆ ಸಿಕ್ಕಿ, ಆ ಶರೀರವಷ್ಟೇ ನಾನು ಎಂಬ ತಪ್ಪು ತಿಳಿವಳಿಕೆಗೆ ಸಿಕ್ಕಿಕೊಂಡಿರುತ್ತದೆ. ಒಂದು ಕಲ್ಲು ಮತ್ತೊಂದು ಕಲ್ಲಿನಿಂದ ಯಾವ ರೀತಿ ಶುಷ್ಕವಾಗಿ ಯಾವ ಸಂಬಂಧವೂ ಇಲ್ಲದಂತೆ ಇವೆಯೋ ಅದೇ ರೀತಿ ಮನುಷ್ಯನು ಇತರರೊಂದಿನ ತನ್ನ ಸಂಬಂಧವನ್ನೂ ಭಾವಿಸಿಕೊಂಡಿದ್ದಾನೆ ಇದರ ಪರಿಣಾಮವಾಗಿ ಜನರು, ಪರಸ್ಪರ ಭಾವನೆಯಿಲ್ಲದೆ ಒಬ್ಬರಿಗೊಬ್ಬರು ದೂರರಾಗಿ ಪರಸ್ಪರ ಸ್ವಾರ್ಥ, ಕಲಹ, ಕೊಲೆ, ಕಳ್ಳತನ, ಹೊಡೆದಾಟ ಬಡಿದಾಟದಂತಹ ಹಿಂಸಾ ಕೃತ್ಯಗಳಲ್ಲಿ ತೊಡಗಿದ್ದಾರೆ. ಅದರಲ್ಲಿ ಅತ್ಯಂತ ಕಠಿಣವಾದ, ಕಠೋರವಾದ ಕಲ್ಲಿಗೆ ತಾತ್ಕಾಲಿಕ ಜಯವು ಲಭಿಸುತ್ತದೆ; ಇದಕ್ಕಿಂತ ಹೆಚ್ಚಿನ ಕಠಿಣತೆಯ ಮತ್ತೊಂದು ಬಲವಾದ ಶತ್ರು–ಕಲ್ಲು ಎದ್ದಿತೆಂದರೆ ಆ ಕಲ್ಲು ಪುಡಿ ಪುಡಿಯಾಗುತ್ತದೆ.

ಹೀಗೆ ಬುದ್ಧಿ ಕಲಿತ ಅಹಂ, ಆಗ ತನ್ನ ಅವಿನಾಶಿ ತತ್ವದ ನೆಲೆಯನ್ನು ಕಂಡು, ಸ್ಥೂಲ ಶರೀರವನ್ನು ಗೆದ್ದು, ಅದನ್ನು ಕಲ್ಲಿನಿಂದ ಎಣ್ಣೆಗೆ ಪರಿವರ್ತಿಸಿ, ತನ್ನ ಬೆಳಕು ಎಲ್ಲ ಕಡೆಯೂ ಪ್ರಸರಿಸುವಂತೆ ತನ್ನ ಶರೀರವನ್ನು ಉರಿಯುವ ಬತ್ತಿಯನ್ನಾಗಿಸಲೂ ಸಿದ್ಧವಾಗುತ್ತದೆ. ಈ ಅಹಂಗಳು ಎಷ್ಟು ಹೆಚ್ಚಾಗಿ ತಮ್ಮ ಶರೀರಾತೀತರಾಗಿ ಬೇರೆ ಶರೀರಗಳನ್ನು ಪ್ರವೇಶಿಸಲು ಸಿದ್ಧವಾಗಿರುತ್ತವೆಯೋ, ಅಷ್ಟು ಹೆಚ್ಚಾಗಿ ಅವುಗಳಲ್ಲಿ ಸಾಮರಸ್ಯವುಂಟಾಗಿ, ನಯ, ನೀತಿಗಳಿಂದ ನಡೆಯುವುವು.

'ಅಹಂ' ಎಂಬುದು ತತ್ತ್ವತಃ ನೀತಿಯುಕ್ತವಾದುದು. ಇಲ್ಲದಿದ್ದಲ್ಲಿ ಅದಕ್ಕೆ ಇದು ತಪ್ಪು, ಇದು ಸರಿ ಎಂಬ ಭಾವವೇ ಬರುತ್ತಿದ್ದಿಲ್ಲ. ಇದನ್ನು ನಾವು ತಪ್ಪು ಮಾಡಿದಾಗ ನಮ್ಮನ್ನು ನಾವೇ ದೂಷಿಸಿಕೊಳ್ಳುವುದರಲ್ಲೂ, ಒಳ್ಳೆಯದನ್ನು ಮಾಡಿದಾಗ ನಮ್ಮನ್ನು ನಾವೇ ಮೆಚ್ಚಿಕೊಳ್ಳುವುದರಲ್ಲೂ ಕಾಣುತ್ತೇವೆ.

ಇದು ಮನುಷ್ಯನ ಆತ್ಮ ದರ್ಶನದ ಮಾತಾಯಿತು. ಇನ್ನು ಪರಮಾತ್ಮನ ಜ್ಞಾನ ಹೇಗಾಯಿತೆಂದರೆ ಸತತವಾಗಿಯೂ, ಒಂದು ಕ್ರಮದಿಂದಲೂ, ಭೂವ್ಯಾಕಾಶಗಳಲ್ಲಿ ಕರ್ಮ ನಿತರವಾಗಿರುವ ಪ್ರಚಂಡ

ಶಕ್ತಿಗಳತ್ತ ನೋಡಿ, ಅವು ಅವನ ಸಂಕಲ್ಪ ಶಕ್ತಿಗಳಿಂದ ಅಸ್ತಿತ್ವಕ್ಕೆ ಬಂದಿರುವುವಲ್ಲದೆ, ಇವು ಯಾವ ಸಂಕಲ್ಪವೂ ಇಲ್ಲದೆ ಇದ್ದಕ್ಕಿದ್ದಂತೆ ಹುಟ್ಟಿದುವಲ್ಲವೆಂಬುದನ್ನು ಮನಗಂಡು, ಮನುಷ್ಯನು, ಈ ವಿಶ್ವವನ್ನು ರೂಪಿಸಿ, ಸಲಹುತ್ತಿರುವ ಒಂದು ಮಹಾ ಚೈತನ್ಯವಿರುತ್ತದೆಂಬ ತಿಳಿವಳಿಕೆಗೆ ಬಂದಿರುತ್ತಾನೆ. ಈ ಚೈತನ್ಯವು ಜ್ಞಾನಮಯವಾದುದು, ನಿಷ್ಕಳಂಕ, ಸತ್ ಸ್ವಭಾವವುಳ್ಳದು.

ವೈದಿಕ ಕವಿಗಳು ದೇವರ ವಿಷಯದಲ್ಲಿ ಅವರಿಗಿದ್ದ ಭಾವನೆಗಳನ್ನು ಸಂಕ್ಷಿಪ್ತ, ಸಮತ್ಕಾರಾತ್ಮಕ ಶೈಲಿಯಲ್ಲಿ ನಮಗೆ ಅರುಹಿದ್ದಾರೆ. ಅರ್ಥ ತಿಳಿಯಬೇಕಾದರೆ ಅವರು ಶಬ್ದಗಳೊಡನೆ ಆಡಿರುವ ಆಟಗಳ ಮುಖಾಂತರ ನಾವು ನುಸುಳಬೇಕಾಗುತ್ತದೆ. ಅದರ ಒಗಟುಗಳೊಳಗಿನ ಒಗಟೆಯೆಂದರೆ, ಎಲ್ಲಾ ರೂಪದಲ್ಲಿಯೂ ಅಡಗಿರುವ ಸೂಕ್ಷ್ಮವಾದ, ದೇವರು. ಆದ್ದರಿಂದ ಅವರು ಎಲ್ಲಾ ವಿಧವಾದ ಗೂಢ ಪ್ರಶ್ನೆಗಳನ್ನೂ, ಮೇಲೆ ಮೇಲೆ ವಿರೋಧಾಭಾಸಗಳಂತೆ ತೋರಿಬರುವ ಎಲ್ಲ ವಿಧವಾದ ಸಮಸ್ಯೆಗಳನ್ನೂ ಆ ದೇವರ ಮೇಲೆ ಅಡುಕಿದ್ದಾರೆ. ದೃಶ್ಯ ಪ್ರಪಂಚದಲ್ಲಿ ಕಾಣಬರುವ ಸಮಸ್ತ ವಿಸ್ತುಗಳ ಉಪಮೆಗಳೂ ಆ ದೃಶ್ಯಾತೀತನನ್ನು ವರ್ಣಿಸಲು ಅವರಿಗೆ ಸಾಲದಾಗಿವೆ. ಅವರು ಅವನನ್ನು ಹೃದಯದಲ್ಲಿ ಮಾತ್ರ ಅನುಭವಕ್ಕೆ ತೆಗೆದುಕೊಳ್ಳುತ್ತಿದ್ದರು. ಈ ಉಪಮೆಗಳೂ, ರೂಪಕಗಳೂ ಸ್ವಲ್ಪ ದೂರ ಮಾತ್ರ ನಮಗೆ ಸಹಾಯವಾಗಬಲ್ಲವೇ ವಿನಾ, ಅವನು ಇವುಗಳನ್ನು ಮೀರಿ ಪ್ರಕಾಶಿಸುತ್ತಿರುವನು

ಮನುಷ್ಯನ ಮನಸ್ಸು ಭಾವಿಸಬಲ್ಲ ಅತ್ಯಂತ ಗರಿಷ್ಠವಾದ ದೇವರ ಭಾವನೆಯು ವರಿಷ್ಠಮನ, ಬೃಹನ್ಮನ, ಮಹಾಮನ, ಅದ್ಭುತಮನ ಆ ಮನಸ್ಸಿನ ಫಲವಾದ ಶಬ್ದಗಳಿಂದಾದ ವೇದವು ಆ ದೇವರನ್ನು ಬೃಹಸ್ಪತಿ, ಬ್ರಹ್ಮಣ ಸ್ಪತಿ ಮತ್ತು ವಾಚಸ್ಪತಿ— (ಈ ಎಲ್ಲಾ ಹೆಸರುಗಳ ಅರ್ಥವು ಶಬ್ದಾಧಿಪತಿ ಎಂದಾಗುತ್ತದೆ)—ಎಂಬುದಾಗಿ ಕರೆದಿರುವುದರಲ್ಲಿ ಆಶ್ಚರ್ಯವಿಲ್ಲ. ಪುರಾಣಗಳಲ್ಲಿ ಅವನನ್ನು ಕರೆದಿರುವ ಮತ್ತೊಂದು ಹೆಸರೆಂದರೆ– ಅದು ಬ್ರಹ್ಮಾ ಅಥವಾ ಶಬ್ದಗಳ ಜನಕನೆಂದು, ಬ್ರಹ್ಮಾ, ಬೃಹಸ್ಪತಿ ಎಂಬ ಪದಗಳು ಸಮಾನಾರ್ಥಕಗಳು ಆದ್ದರಿಂದಲೇ ಎಲ್ಲವನ್ನೂ ಸೃಷ್ಟಿಸಿದ ಸೃಷ್ಟಿಕರ್ತ ವಿಶ್ವಕರ್ಮನನ್ನು "ವಾಚಸ್ಪತಿಂ ವಿಶ್ವಕರ್ಮಾಣ ಮೂರ್ತಯೇ ಮನೋಜುವಂ ವಾಜೇ ಅದ್ಯಾಹುವೇಮ", ವಾಚಸ್ಪತಿ, ಶಬ್ದಗಳೊಡೆಯ ಎಂದೂ, ಮನೋಜುವ, ಮನೋವೇಗವುಳ್ಳವನು ಎಂದೂ ಸ್ಪಷ್ಟವಾಗಿ ಕರೆದಿದ್ದಾರೆ. (ಋಗ್ವೇದ 10ನೇ ಮಂಡಲ, 18ನೇ ಸೂಕ್ತ, 7ನೇ ಮಂತ್ರ). ಪ್ರಖ್ಯಾತವಾದ ಮತ್ತೊಂದು ಸೂಕ್ತವಾದ ಋಗ್ವೇದದ ದಶ ಮಂಡಲದ 129 ನೇ ಸೂಕ್ತವು ಸೃಷ್ಟಿಯ ವಿಷಯವನ್ನು ಹೇಳುತ್ತಾ ಮನಸ್ಸಿನ ಬೀಜವೆಂಬಂತೆ ಮನಸ್ಸಿನ ರೇತಸ್ಸು ಉತ್ಪನ್ನವಾಯಿತೆಂದು ಹೇಳುತ್ತದೆ ["ಮನಸೋರೇತಃ ಪ್ರಥಮಾ ಯದಾಸೀತ್ (ಮಂತ್ರ೪) ] ಅದೇ ಮಂಡಲದ 72ನೇ ಸೂಕ್ತವು ಬೃಹಸ್ಪತಿಯು ಸೃಷ್ಟಿಯ ಈ ವಸ್ತುಗಳನ್ನು ತನ್ನ ಬಾಯಿಯಿಂದ ಊದಿದನೆಂಬುದಾಗಿ ಹೇಳುತ್ತದೆ. ಅಂದರೆ ಶಬ್ದಗಳೊಡೆಯನು ಊದಿದ ಇವುಗಳನ್ನು ಅವನ ಮಾತುಗಳೆಂದು ತಿಳಿಯಬೇಕಾಗುತ್ತದೆ. ಕಾವ್ಯ ದೃಷ್ಟಿಯಿಂದ ನೋಡಿದರೆ ಮನಸ್ಸು ಅಥವಾ ಆಲೋಚನೆಯು ಮಾತುಗಳ ಜನಕನಾಗಿರುತ್ತದೆ. ನಿರೂಪಕನ ಬಾಯಿಂದ ಹೊರ ಹೊರಟ ಪ್ರತಿಯೊಂದು ಮಾತೂ ಕೇಳುವವನ ಮನಸ್ಸಿನ ಮುಂದೆ ಅವನು ಹೇಳುವ ವಸ್ತುವಿನ ರೂಪವನ್ನೂ, ಹೇಳುವುದು ಒಂದು ಘಟನೆಯಾದರೆ ಅದು ನಡೆದ ಕಾರ್ಯದ ರೀತಿಯನ್ನೂ, ತಂದು ನಿಲ್ಲಿಸುತ್ತದೆ. ಉದಾಹರಣೆಗೆ 'ಕುದುರೆ' ಎಂಬ ಮಾತನ್ನಾಡಿದ ತಕ್ಷಣವೇ, ಮನಸ್ಸಿನ ಕಣ್ಣು ಆ ಕುದುರೆಯ ಮೂರ್ತಿಯನ್ನು ಕಾಣುತ್ತದೆ ಒಂದು ಕದನವನ್ನು ವರ್ಣಿಸುತ್ತಿರುವ ಒಬ್ಬ ಪ್ರಭಾವಶಾಲಿ ವಾಗ್ಮಿಯು ಅವನ ಮಾತುಗಳಿಂದ ಕೇಳುವವರು ತಮ್ಮ ಕಣ್ಣ ಮುಂದೆಯೇ ನೋಡುತ್ತಿರುವರೋ "ಉಕ್ತೇಷು ಶಸ್ಯಮಾನೇಷು ಯಃ ಪಠ್ಯಾದುತ್ತರೇ ಯುಗೇ" (ಮಂತ್ರ 1) ಎಂಬ ರೀತಿಯಲ್ಲಿ ಅದನ್ನು ವಿವರಿಸಿ, ಅವರು ಅದರಿಂದ ಕ್ರೋಧ, ದುಃಖ ಅಥವಾ ಸಂತೋಷಗಳನ್ನು ಹೊಂದುವ ರೀತಿಯಲ್ಲಿ ಮಾಡುತ್ತಾನೆ ಒಂದು ಮಾತು, ಅದರ ಅರ್ಥಕ್ಕೆ ಯಾವ ಉದ್ವೇಗವನ್ನಿಟ್ಟು

ಕೊಂಡಿವೆಯೋ ಅದನ್ನು ಸ್ಪಷ್ಟವಾಗಿ ಸೂಚಿಸದಿದ್ದಲ್ಲಿ ಅದು ಮಾತೇ ಎನ್ನಿಸಿಕೊಳ್ಳಲಾರದು. ಕೇಳುವವರ ಮನಃ ಪ್ರಪಂಚಕ್ಕೆ ನಾಟುವಂತೆ ಕವಿಯು ತನ್ನ ಸುಂದರ ಶಬ್ದ-ಸಂಯೋಜನೆಯಿಂದ ರೂಪಗಳನ್ನೂ, ಕಾರ್ಯಗಳನ್ನೂ ಸೃಷ್ಟಿಸುತ್ತಾನೆ. ಒಬ್ಬ ಸಾಮಾನ್ಯ ಕವಿಗೇ ಇಷ್ಟತಮಟ್ಟಿನ ಸಾಧ್ಯತೆ ಇರುವುದಾದರೆ ಇನ್ನು ಆ ಬೃಹಸ್ಪತಿಗೆ ಎಷ್ಟರ ಮಟ್ಟಿನ ಸಾಮರ್ಥ್ಯವಿರ ಬಹುದು ? ಅವನು ತಪಸ್ಸೆಂಬ ತನ್ನ ಸರ್ವೋತ್ಕರ್ಷ ವಾದ ಮಾನಸಿಕ ಸತ್ವದಿಂದ ಕೂಡಿರುವ ಅಸಾಧಾರಣ ಕವಿ. ಆ ಶಕ್ತಿಯಿಂದ ಅವನು ಒಂದು ವಸ್ತುವಿನ ಒಳಗೆ ಇಂತಹ ಅಂಗಗಳಿರಬೇಕು, ಹೊರಗೆ ಇಂತಹು ದಿರಬೇಕು ಎಂಬ ವಿವರವನ್ನೆಲ್ಲಾ ಸ್ಪಷ್ಟವಾಗಿಯೂ, ನಿಷ್ಕೃಷ್ಟವಾಗಿಯೂ ಪರಿಭಾವಿಸಿ, ಅಂತಹ ಭಾವ ಗಳನ್ನು ಮಾತುಗಳಿಂದ ಹೊರ ಸೂಸಿದ ಕೂಡಲೇ ವಸ್ತುಗಳು ಅಸ್ತಿತ್ವಕ್ಕೆ ಬರುವುವು.

ಮನುಷ್ಯನ ಹೆಸರು ಕೊಡುವ ಶಕ್ತಿಯು ಅದ್ಭುತ ವಾಗಿದ್ದರೂ, ಆವನಿಗೇ ವಸ್ತುಗಳ ಪೂರ್ಣ ತಿಳಿವಳಿಕೆ ಯಿಲ್ಲದಿರುವ ಕಾರಣ, ಆವನ ಆ ಶಕ್ತಿಯು ಪೂರ್ಣ ವೆಂದು ಹೇಳಲಾಗದು. ಏಕೈಕ ವಸ್ತುವಿನ ಎಲ್ಲಾ ಗುಣಗಳನ್ನೂ ತಿಳಿಸಬೇಕಾದರೆ, ಅವನು ಹಲವು ಹೆಸರು ಗಳನ್ನೇ ಉಪಯೋಗಿಸಬೇಕಾದೀತು. ಹಾಗೂ ಅದರಲ್ಲಿ ಅವನಿಗೆ ಇನ್ನೂ ತಿಳಿಯದಿರುವ ಅನೇಕ ಗುಣಗಳಿರು ವುದು ಸಾಧ್ಯ. ಏಕೆಂದರೆ ಆ ವಸ್ತುವಿನ ಚೈತನ್ಯ ವನ್ನೇ ಇವನು ಒಳಹೊಗಲಾರ, ಪರಿಪೂರ್ಣವಾಗಿ ಅದು ಏನು ಎಂಬುದನ್ನು ಇವನು ತಿಳಿಯಲಾರ. ಆದರೆ ಎಲ್ಲವನ್ನೂ ತಿಳಿಯುವ ಮನಸ್ಸೆಂದರೆ 'ಕವಿಂ ಕವೀನಾಂ' ಎಂದು (ಋ. II, 23, 1) ಹೇಳಲ್ಪಟ್ಟಿರುವ ನಿಜ ವಾದ ಕವಿ ಬೃಹಸ್ಪತಿಯೇ. ಅವನ ಕಾವ್ಯವೇ ಈ ವಿಶ್ವ. ಮಾತುಗಳು ಹೇಗೆ ಮನಸ್ಸಿನಿಂದ ಹೊರಕ್ಕೆ ಕಳುಹಿಸ ಲ್ಪಟ್ಟು ಸೃಷ್ಟಾ ಎಂದಾದುವೋ ಹಾಗೆಯೇ ಉತ್ಪ ತ್ತಿಯೂ ಸಂಸ್ಕೃತದಲ್ಲಿ ಸೃಷ್ಟಿ ಅಥವಾ ಹೊರ ಹಾಕಲ್ಪ ಟ್ಟುದು ಎಂದಾಗಿದೆ. ಸೃಷ್ಟಿಗಾಗಿ ಸೃಷ್ಟಿಕರ್ತನನ್ನು ಕವಿ ಬೃಹಸ್ಪತಿ ಎಂದು ಭಾವಿಸಿರುವುದಕ್ಕೆ ಸಂಗತವಾಗಿ ಉಪಯೋಗಿಸಲ್ಪಟ್ಟಿರುವ ಮತ್ತೊಂದು ವಾಕ್ಸರಣಿ ಯೆಂದರೆ 'ನಾಮರೂಪಗಳ ವ್ಯಾಕರಣ'. ಈ ಪದದ ಪ್ರಯೋಗವು ಮಾತ್ರ ಋಗ್ವೇದದಲ್ಲಿ ಕಾಣಬರದಿರುವುದು ನಿಜವಾದರೂ "ಅನೇನ ಜೀವೇನಾತ್ಮ ನಾನು ಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ" ಎಂಬುದಾಗಿ ಛಾಂದೋಗ್ಯದ VI, 3, 2 ರಲ್ಲೂ ಬೃಹದಾರಣ್ಯಕದ I-4, ರಲ್ಲೂ ಕಾಣಬರುತ್ತದೆ. ಆದರೆ ಈ ಉಪ ನಿಷತ್ತುಗಳು ಬ್ರಾಹ್ಮಣಗಳ (ವೇದ) ಕಾಲದಷ್ಟೇ ಹಳೆ ಯುವು. ಆದರೆ ಈ ನಾಮರೂಪ ಸಿದ್ಧಾಂತವನ್ನು ಋಗ್ವೇದದಲ್ಲಿಯೇ, ತ್ವಷ್ಟೃವನ್ನು ವಿಶ್ವರೂಪನೆಂದು ಕರೆದಿರುವುದರಲ್ಲೂ, ಇಂದ್ರನು ತನ್ನ ಮಾಯೆಗಳಿಂದ ಎಲ್ಲಾ ರೂಪವನ್ನೂ ತಳೆದನು ಮತ್ತು ವರುಣನು ಎಲ್ಲಾ ಗುಪ್ತನಾಮಗಳನ್ನೂ ತಿಳಿದವನಾಗಿ ಎಲ್ಲಾ ರೂಪಗಳನ್ನೂ ಇಟ್ಟುಕೊಂಡವನಾಗಿರುತ್ತಾನೆ ಎಂಬುದ ರಲ್ಲೂ ನಾವು ಕಾಣಬಹುದಾಗಿದೆ. ಯಜುರ್ವೇದದಲ್ಲಿ ಕಂಡುಬರುವ ಪುರುಷ ಸೂಕ್ತದ ಪಾಠಾಂತರದಲ್ಲಿ ಎಲ್ಲಾ ರೂಪಗಳನ್ನೂ ಆಲೋಚಿಸುತ್ತಾ, ಅದಕ್ಕೆ ಹೆಸರು ಕೊಟ್ಟು ಅವುಗಳನ್ನು ಉಚ್ಚರಿಸುತ್ತಿರುವ ಚಿಂತನ ನಿರತ ಪುರುಷನೇ ಅವನು ಎಂದು ಹೇಳುವ

ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ।
ನಾಮಾನಿ ಕೃತ್ವಾಽಭಿವದನ್ ಯದಾಸ್ತೇ॥

ಎಂಬ ಒಂದು ಮಂತ್ರವೂ ಇರುತ್ತದೆ.

ಆದರೆ ಯಾವ ಸೃಷ್ಟಿಕರ್ತನನ್ನು ವಿಶ್ವಕರ್ಮ ಸೂಕ್ತದಲ್ಲಿ 'ಸಾಧು ಕರ್ಮಾ' (x, 81, 7) "ವಿಶ್ವಶಂಭೂರವಸೇ ಸಾಧು ಕರ್ಮಾ" ಎಂದು ಕರೆದಿ ದ್ದಾರೋ, ಮತ್ತು ಯಾರನ್ನು ವರುಣ ಮತ್ತು ಇತರ ದೇವತೆಗಳಂತೆ ಋಗ್ವೇದದಲ್ಲಿ, ಮಿತ್ರನೆಂದೂ, ಶಿಷ್ಟ ಪರಿಪಾಲಕನೆಂದೂ, ದುಷ್ಟರ ಮತ್ತು ಪಾಪಿಗಳ ಶಿಕ್ಷಕ ನೆಂದೂ ಹೊಗಳಿರುವರೋ ಮತ್ತು ಯಾರು ಯಮ ನಂತೆ ಸುಕೃತಿಗಳಿಂದ ಮಾತ್ರ ಗಮ್ಯನೆಂದು ಹೇಳಲ್ಪ ಟ್ಟಿರುವನೋ, ಅಂಥವನು ಪಾಪಿಗಳು, ಭಯಂಕರ ಕ್ರೂರ ಮೃಗಗಳನ್ನು ಸೇರಿಸಿಕೊಂಡು ಈ ಎಲ್ಲವೂ ಆಗಿದ್ದಾನೆ ಎಂದು ಹೇಳುವುದು ಹೇಗೆ? ಋಗ್ವೇದಾದಿ ಗಳು ಅವನು ಹಾಗೆಯೇ ಎಲ್ಲವೂ ಆದನೆಂದೇ ಹೊಗ ಳಿರುತ್ತವೆ ಮೇಲೆ ಹೇಳಿದಂತೆ ಇಂದ್ರನೂ ಎಲ್ಲಾ ರೂಪವಾದನು.

"ಆ ಏಕೈಕನೇ ಈ ಎಲ್ಲವೂ ಆದನು" (ಋಗ್ವೇದ VIII, 58, 3.

"ಹುಟ್ಟಲಿಲ್ಲ; ಆದರೆ ಅವನೇ ಈ ನಾನಾ ರೀತಿಯಲ್ಲಿ ಹುಟ್ಟಿರುವನು" (ಅಜಾಯ ಮನೋ ಬಹುಧಾ ವಿಜಾಯತೇ— ಪುರುಷ ಸೂಕ್ತದ ಉತ್ತರ ನಾರಾಯಣ ಭಾಗ).

"ಅವನು ಆಶಿಸಿದನು: 'ನಾನು ಬಹುವಾಗಲೇ' ಎಂದು; ಹಾಗೆ ಆಶಿಸಿ, ಅವನೇ ಎಲ್ಲವೂ ಆದನು". ಇದೇ ಉಪನಿಷತ್ತುಗಳ ಧ್ವನಿ, ಅವುಗಳಲ್ಲಿ, ಕೆಲವು ಅವನು ಹೀಗಾಗುವುದಕ್ಕೆ ಮುಂಚೆ "ಸತಪೋ ತಪ್ಯತ" (ತೈ. ಉ. ೨-೬) ತಪಸ್ಸು ಮಾಡಿದನೆಂದು ಹೇಳುತ್ತವೆ, ತಪಸ್ಸು ಮಾಡಿದ ಮೇಲೆ ಅವನು ಹೀಗಾದವನು, ನಮ್ಮಂಥ ಪಾಪಿಗಳಾದುದು ಹೇಗೆ? ಹಾಗಾದರೆ ಅವನು ಈ ಎಲ್ಲಾ ಜೀವಿಗಳಾದನು ಎಂದರೆ ಅರ್ಥ ವೇನು? ಒಂದು ಸಮಾಜದಲ್ಲಿರುವ ಒಬ್ಬ ಒಳ್ಳೆಯ ಮನುಷ್ಯನು "ನಾನೇ ನನ್ನ ನೆರೆ ಹೊರೆ" ಎಂದರೆ, ಒಬ್ಬ ಒಳ್ಳೆಯ ರಾಜನು, 'ನಾನೇ ನನ್ನ ಎಲ್ಲಾ ಪ್ರಜೆ' ಎಂದರೆ, ಪ್ರತಿಯೊಬ್ಬರೂ ಅವನನ್ನು, ತನ್ನ ನೆರೆಹೊರೆ ಯವರನ್ನು, ತನ್ನ ಮನುಷ್ಯರನ್ನು, ತನ್ನಂತೆಯೇ ಭಾವಿಸುವಂಥ ವಿಶಾಲ ಪ್ರೇಮವುಳ್ಳವನೆಂದೂ, ಅವನು ಅದಕ್ಕಾಗಿ ಅವರಲ್ಲೆಲ್ಲಾ ತನ್ನನ್ನು ವ್ಯಾಪ್ತಗೊಳಿಸಿದ್ದಾನೆ ಎನ್ನುವುದರಲ್ಲಿ ಸಂಶಯವಿಲ್ಲ. ಯಾರನ್ನು ತನ್ನಂತೆಯೇ ತಿಳಿಯುತ್ತಾನೋ ಅವರ ಪಾಪವನ್ನು ಇಂಥ ಒಳ್ಳೆಯ ಮನುಷ್ಯನಿಗೇ ಆರೋಪಿಸುವಂತದ ಮೂರ್ಖತೆಯನ್ನು ಯಾರೂ ತಾಳಲಾರರು. ಪರಮೋನ್ನತನಾದ, ನೈತಿಕಾ ದರ್ಶನಾದ, ದೇವರು ಎಲ್ಲಾ ಜೀವಿಗಳನ್ನೂ ತನ್ನಂ ತೆಯೇ ಪ್ರೀತಿಸುತ್ತಾನೆ. ಅವನು ಈ ಜೀವಿಗಳಾಗಿ ದ್ದಾನೆ ಎಂದರೆ ಇದೇ ತಾತ್ಪರ್ಯ. ಅವನೇ ಇದೆಲ್ಲವೂ ಆದನೆಂಬುದರ ಜೊತೆಗೆ ಅವನು ಈ ಸೃಷ್ಟ ವಸ್ತು ಗಳೊಳಕ್ಕೆ ಪ್ರವೇಶಿಸಿ ಹೀಗಾದನೆಂಬ ಉಕ್ತಿಯೂ ಇದೆ. (ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್). ಇದು ಅವನು ಸರ್ವಾತ್ಮನಾ ವಿಶ್ವಪ್ರೇಮವೇ ಆದನೆಂಬುದನ್ನು ಸ್ಪಷ್ಟವಾಗಿ ತೋರಿಸುತ್ತದೆ. ಈ ಅನುಪ್ರವೇಶ ಅಥವಾ ಒಳಹೊಕ್ಕನೆಂಬ ಭಾವನೆಯು ಸಮಗ್ರ ವೈದಿಕ ಸಾಹಿತ್ಯದಲ್ಲೆಲ್ಲಾ ಅನುರಣಿತವಾಗಿದೆ. ಇದಿಲ್ಲದೆ ಯಾವನೊಬ್ಬನೂ ಇತರರನ್ನು ತನ್ನಂತೆ ಭಾವಿಸ ಲಾರನು.

(ಮುಂದುವರಿಯುವುದು)

# ಪೂಜೆ

ಕಾವ್ಯ-ಗಂಗೆಯೊಳ್ ಮಿಂದು ಭಕ್ತಿಯುಡುಗೆಯ
ತೊಟ್ಟು
ಭಾವದಲಿ ತನ್ಮಯನು ನಾನಾಗುವೆ;
ಬಯಕೆ ತೀರಿಸು ಎಂದು, ಹರಕೆ ಸಲ್ಲಿಸಲೆಂದು
ನಿನ್ನಯಾ ಸಿರಿಯಡಿಗೆ ನಾನೆರಗುವೆ.
ದೇಹ ದೇಗುಲದಲ್ಲಿ ಆತ್ಮ-ಜ್ಯೋತಿಯ ಹಚ್ಚಿ
ನಿರುತ ನಿನ್ನನು ನಾನು ಅರ್ಚಿಸುವೆನು;

ನುಡಿಯ ಬಟ್ಟಲಿನಲ್ಲಿ ಕವನ ಪುಷ್ಪವನೆತ್ತಿ
ನಿನ್ನ ಪದತಲದಲ್ಲಿ ಅರ್ಪಿಸುವೆನು.
ಕರಣ ತಣಿಯಲಿಕಾಗಿ ಕೀಳು ಸುಖ ಕಾದಿಹುದು
ಬಿಗಿಯದಿರು ನೀ ನನಗೆ ಭವದ ಸಂಕೋಲೆ;
ನೈಜತೆಯ ಪಥದಲ್ಲಿ ಕೈಹಿಡಿದು ನಡೆಸೆನ್ನ
ತಾಗದೊಲು ಎಂದಿಗೂ ಪಾಪಜ್ವಾಲೆ.

" ಅಲ್ಲಮ "

# ಭಾಷಾ ಮೂಲವನ್ನು ಕುರಿತ ಕೆಲವು ಸಿದ್ಧಾಂತಗಳು

ಲೇಖಕರು :
ಹಂ ಪ. ನಾಗರಾಜಯ್ಯ

ಭಾಷಾ ವಿಜ್ಞಾನದಲ್ಲಿ ಬೇರೆ ಯಾವ ವಿಷಯವನ್ನು ಕುರಿತೂ ಭಾಷೆಯ ಉಗಮುವನ್ನು ಕುರಿತು ನಡೆದಷ್ಟು ವಿವರವಾಗಿ, ವಿವಾದಾಸ್ಪದವಾಗಿ ವಿಚಾರ ಮಂಥನ ನಡೆದಿಲ್ಲ. ಎಲ್ಲ ತೆರನಾದ ವಿದ್ವಾಂಸರೂ ಒಂದಲ್ಲ ಒಂದು ಕಡೆ ಇದರ ಬಗ್ಗೆ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಕೆಲವರು ಪುಟಗಟ್ಟಲೆ ಬರೆದಿದ್ದಾರೆ. ಆದರೆ ಇಷ್ಟೆಲ್ಲಾ ವಿಪುಲವಾದ ಬರವಣಿಗೆ ಬಂದಿದ್ದರೂ ವಿಸ್ತಾರವಾದ ಸೂಚನೆಗಳು ವ್ಯಕ್ತವಾಗಿದ್ದರೂ ಸರಿಯಾದ ಫಲ ಸಫಲ, ಸಿಗಲಿಲ್ಲ, ಬುದ್ಧಿಯ ಗುದ್ದಾಟದ ಶ್ರಮವಾಯಿತೇ ಹೊರತು ಪರಿಣಾಮವೇನೂ ಆಗಲಿಲ್ಲ. ವಿದ್ವಾಂಸರ ಗಾಳಿ ಗೋಪುರಗಳು, ಆಕಾಸೌಧಗಳು, ಬುಡಭದ್ರವಿಲ್ಲದ ಕಟ್ಟಡಗಳಂತೆ, ವೈಜ್ಞಾನಿಕ ವಿಚಾರದ ವಿಶ್ಲೇಷಣೆಗೆ ಸಿಕ್ಕಾಗ ಕುಸಿದುಹೋದುವು. ಇಂಥ ವಿಚಾರ ಪ್ರತಿಪಾದನೆಗಳಲ್ಲಿ ಕೈಹಾಕಿದ ಕೆಲವು ಮಹನೀಯರೇ ಇವುಗಳ ಕುಂದುಕೊರತೆಗಳನ್ನು ಮನಗಂಡು ಈ ವಿಚಾರವನ್ನು ಕೈಬಿಟ್ಟರು! ಹೆತ್ತವರಿಗೆ ಹೆಗ್ಗಣ ಮುದ್ದು ಎನ್ನುವಂತೆ ಮತ್ತೆ ಕೆಲವರು ತಮ್ಮ ವಾದಗಳನ್ನು ಬದಿಗೊತ್ತದೆ ತಾವು ಹೇಳಿದುದೇ ಸರಿಯೆಂದು ನಂಬಿದರು. ಎಷ್ಟೇ ಗಟ್ಟಿಯಾಗಿ ಅವರು ಪಟ್ಟು ಹಿಡಿದಿದ್ದರೂ ಆ ತರ್ಕಗಳನ್ನು ಅವರ ಹೊರತಾಗಿ ಮತ್ತಾರೂ ಮನ್ನಿಸದೇ ಹೋದರು. ಇಂದು ಈ ತತ್ವಗಳಿಗೆ ಯಾವ ಹೆಚ್ಚಿನ ಮನ್ನಣೆಯೂ ಇಲ್ಲ; ಇವುಗಳನ್ನು ಕೇವಲ ಆಧಾರಗಳ ಇಂಬಿಲ್ಲದ ಊಹೆಗಳೆಂದು ಹುಸಿನಗೆಯನ್ನು ಸೂಸಿ ಹಾರಿಸಿಬಿಡುವರು. ವಿವಿಧ ವಿದ್ವಾಂಸರು ವಿವರಿಸಿದ ಈ ತತ್ವಗಳ ಒಟ್ಟು ಸಾರವನ್ನು ಸೇರಿಸಿದರೂ ಅದು ಭಾಷೆಯ ಹುಟ್ಟಿನ ಅರ್ಧಗುಟ್ಟನ್ನೂ ಹೇಳಿದಂತಾಗುವುದಿಲ್ಲವೆನ್ನಬಹುದು. ಹಾಗೆ ನೋಡಿದರೆ ಇನ್ನಿಷ್ಟು ಹೊಸ ತತ್ವಗಳು ಹುಟ್ಟಿದರೂ ಸಂಪೂರ್ಣ ಸತ್ಯ ತಿಳಿದಂತೆ ಆಗುವುದಿಲ್ಲ. ಈ ಬಗೆಯ ವಿವರಣೆಗಳೇನಿದ್ದರೂ, ಕುರುಡರು ಆನೆಯನ್ನು ಭಾಗಶಃ ನೋಡಿ ವಿವರಿಸಿದ ಕತೆಯಂತೆ ಭಾಷೆಯ ಅಖಂಡ ದರ್ಶನವನ್ನೀಯುವುದಿಲ್ಲ. ಆದಾಗ್ಯೂ ಒಂದು ಕಾಲಕ್ಕೆ ಈ ತತ್ವಗಳೂ ಜಿಜ್ಞಾಸುಗಳ ಗಮನ ಸೆಳೆದು ಮಾನ್ಯವಾಗಿದ್ದವೆಂಬುದನ್ನು ಮರೆಯಬಾರದು ಕಾಲ ಕಳೆದಂತೆ, ಹೊಸ ಹೊಸ ಸಂಶೋಧನೆ ನಡೆದಂತೆ ಎಷ್ಟೋ ಹಳೆಯ ಅಭಿಪ್ರಾಯಗಳೂ-ಸಿದ್ಧಾಂತಗಳೂ ಹೆಚ್ಚುಕಡಿಮೆಯಾ

ಗುತ್ತವೆ; ಅವನ್ನು ತಿದ್ದಬೇಕಾಗುತ್ತದೆ. ಭಾಷೆ ಎಂದು ಹೇಗೆ ಹುಟ್ಟಿತು? ಎಂಬ ಪ್ರಶ್ನೆಗೆ ಹೇಳಿರುವ ಉತ್ತರಗಳೂ ಅಷ್ಟೆ. ಆದರೂ ಭಾಷಾ ವಿಜ್ಞಾನದ ಬೆಳವಣಿಗೆಯ ದೃಷ್ಟಿಯಿಂದ ಈ ಮೊದಲ ಮೆಟ್ಟಲುಗಳನ್ನು ಗುರುತಿಸದೆ ಮುಂದೆ ಹೋಗಬಾರದು, ಹೋಗುವುದು ಸರಿಯಲ್ಲ. ಆರಂಭದ ಘಟ್ಟಗಳ ನೆರವಿನಿಂದ ತಾನೆ ಇತರ ಹೊಸ ವಿಚಾರಧಾರೆ ಮೂಡಿ ಬಂದಿರುವುದು? ಈ ದೃಷ್ಟಿಯಿಂದಲೂ ಪ್ರಾರಂಭದ ಪ್ರಯತ್ನಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ಆದುದರಿಂದ ಅವನ್ನು ಅಲ್ಲಗಳೆಯಬಾರದು, ಸರಿಯೆಂದು ಅಂಗೀಕರಿಸಲೂ ಬಾರದು. ಅಂತಹ ಕೆಲವು ಪ್ರಯತ್ನಗಳನ್ನು ಇಲ್ಲಿ ವಿವರಿಸಲಾಗಿದೆ. ಭಾಷಾಶಾಸ್ತ್ರದ ಭವನವನ್ನು ಪ್ರವೇಶಿಸುವ ಮೊದಲು ಈ ಮೆಟ್ಟಲುಗಳನ್ನು ಹತ್ತಿಹೋಗಬೇಕು.

1) Onomatopoeic Theory: ಅನುಕರಣ ವಾಚಕ ಶಬ್ದೋತ್ಪತ್ತಿ ತತ್ತ್ವವೆನ್ನುವರು, ಅನುಕರಣವಾದವೆನ್ನುವರು, ಬೊಗಳುವಾದವೆಂದೂ ಕರೆಯುವರು. ಇದನ್ನು Bow-wow theory, Imitative theory, Echoic Theory ಎಂದೂ ಕರೆಯುವರು. ನಾಯಿಯ-ಶ್ವಾನದ ಬೌ-ಬೌ ಎಂದು ಬೊಗಳುವ ಅನುಕರಣಧ್ವನಿಯಿಂದ ಈ ಈ ವಾದಕ್ಕೆ Bow-wow Theory ಎಂಬ ಹೆಸರು ಬಂದಿದೆ. ಈ ಹೆಸರನ್ನು ಮ್ಯಾಕ್ಸ್‌ಮುಲ್ಲರ್ ಅವರು 1864 ರಲ್ಲಿ ಬಳಕೆಗೆ ತಂದರು. ಇದನ್ನು Onomatopoeic Thery ಎಂದು ಕರೆಯುವರು. Onomatopoeia ಎಂದರೆ ನಿಸರ್ಗದಲ್ಲಿ ಉಂಟಾಗುವ ಸಹಜಧ್ವನಿಗಳ ಅನುಕರಣೆಯಿಂದ ಪದಗಳು ರೂಪುಗೊಳ್ಳುವುದು ಎಂದು ಅರ್ಥ, ಮತ್ತು ಅಂಥ ಪದಗಳಿಗೆ Onomatopoeic ಅಥವಾ onomatopoetic Word ಎನ್ನುವರು. ಧ್ವನಿಯ ಯಥಾವತ್ತಾದ ಅನುಕರಣೆಯಿಂದಲೇ ಭಾಷೆಯಲ್ಲಿನ ಪದಗಳು ರೂಪುಗೊಂಡಿವೆಯೆಂದು ಹೇಳಿದ ಸಂಶೋಧಕರ ವಾದವನ್ನು ಟೈಲರ್ [Tylor] ಮೊದಲಾದವರು ಅನುಮೋದಿಸಿದರು. ಇದಕ್ಕೆ ಸಣಗನ

*F. Max-Muller; Life, 2-97

ಬೊಗಳುವ ಧ್ವನಿ ಒಂದು ಉತ್ತಮ ಉದಾಹರಣೆಯಾ
ತೆಗೆದುಕೊಂಡಿದ್ದಾರೆ ಈ ವಾದವನ್ನು ಮಂಡಿಸುವವರು
ಆದರೆ ಪ್ರಾಚೀನ ಪದಗಳು ಶಬ್ದದ-ಧ್ವನಿಯ ಅನುಕ
ಣೆಯಿಂದಲೇ ಸೃಷ್ಟಿಯಾಗಿವೆಯೆಂಬುದನ್ನು ರೆನಾನ್
(Renan) ಮೊದಲಾದವರು ವಿರೋಧಿಸಿದರು
ಮಾನವ ತನಗಿಂತಲೂ ಕೀಳಾದ ಪ್ರಾಣಿಗಳಿಂದ ಅ
ಗಳಿಗೆ ಸಹಜವಾದ ಬೊಗಳುವಿಕೆಯನ್ನೂ-ಅರಚುವಿ
ಯನ್ನೂ, ಅನುಕರಣೆಯಿಂದ ಕಲಿತು ತನ್ನ ನುಡಿಯನ
ರೂಢಿಸಿಕೊಂಡನೆಂಬುದು ಅಸಂಬದ್ಧ ಪ್ರಲಾಪದಂ
ಕಾಣುತ್ತದೆ. ಅವನು ಅನೇಕ ಸಂದರ್ಭಗಳಲ್ಲಿ ಹೀ
ಅನುಕರಣೆಯಿಂದಲೇ ತನ್ನ ಬಾಳನ್ನು-ಭಾಷೆಯನ್ನೂ
ಬೆಳೆಸಿಕೊಂಡಿದ್ದಾನೆ, ನಿಜ. ಆದರೆ ಭಾಷೆಯಲ್ಲಿ
ಅನುಕರಣೆಯ ಪ್ರಭಾವ ಎಷ್ಟು? ಎಲ್ಲಿಯವರೆಗೆ
ಎಂಬುದನ್ನು ಯೋಚಿಸಬೇಕು. ಮನುಷ್ಯ ಪ್ರಾಣಿಗ
ಧ್ವನಿಯನ್ನು ವಿನೋದಕ್ಕಾಗಿ ಅನುಕರಣೆ ಮಾಡಿ ತೋ
ಸಬಲ್ಲ, ಆ ಶಕ್ತಿ ಅವನಿಗೆ ಇದೆ. ಅನುಕರಣೆಯ
ಮೂರು ಬೇರೆ ಪ್ರಕಾರಗಳಿವೆ, (ಅ) ಧ್ವನ್ಯಾತ್ಮಕ ಅ
ಕರಣೆ (ಇ) ಅನುರಣನಾತ್ಮಕ ಅನುಕರಣೆ (ಉ) ದೃಶ
ತ್ಮಕ ಅನುಕರಣೆ. ಈ ತ್ರಿವಿಧ ಅನುಕರಣೆಯನ
ಪ್ರಾಚೀನ ಮಾನವ ಮಾತ್ರವಲ್ಲ, ಅರ್ವಾಚೀನ ಮಾ
ವನೂ ಈ ಕ್ರಿಯೆಮಾಡಬಲ್ಲ, ಆದರೆ ಆದರಿಂದಲ
ಭಾಷೆ ಬೆಳೆಸಿಕೊಂಡನೆಂಬ ವಾದ ತ್ಯಾಜ್ಯ.

ಮ್ಯಾಕ್ಸ್‌ಮುಲ್ಲರ್ ಅವರ ಹೇಳಿಕೆ ಇಲ್ಲಿ ಉಲ್ಲೇ
ನೀಯವಾಗಿದೆ, 'ಕೊ ಕ್ಕೊ ಕ್ಕೋ ಎಂದು ಕೂಗು
ಕೋಳಿ, ಡಕ್ ಡಕ್ ಎನ್ನುವ ಬಾತು, ಕಾಕ
ಎನ್ನುವ ಕಾಕ (ಕಾಗೆ) ಕುಊ ಎನ್ನುವ ಕೋಕಿ
[ಕೋಗಿಲೆ, ಕುಕೂ (ಇಂಗ್ಲೀಷ್)] ಮುಂತಾದ ಪ
ಮಿತ ಪದಗಳನ್ನು ಮಾತ್ರ ವಿವರಿಸುವ ಮಟ್ಟಿಗೆ
ಅನುಕರಣವಾಚಕ ತತ್ತ್ವ ಸಮಂಜಸವಾಗಿರುವಂ
ತೋರುತ್ತದೆ; ಆದರೆ ಅಲ್ಲಿಂದ ಮುಂದಕ್ಕೆ ಈ ತ
ಅನ್ವಯವಾಗದೆ ತಪ್ಪುಗಾಗುತ್ತದೆ. ಭಾಷೆ ನಿಜವಾ
ಆರಂಭವಾಗುವುದು ಇದರಿಂದ ಈಚೆಗೆ ಅಲ್ಲ, ಆಚೆ
ಎಂದೂ ಮನದಟ್ಟಾಗುತ್ತದೆ * ಅಲ್ಲದೆ ಈ ಅನುಕ
ಣೆಯ ಚಟುವಟಿಕೆ ಬಾಲ್ಯದಲ್ಲಿ ಸಾಧ್ಯ, ಸಹಜ. ಚ

ಮಕ್ಕಳು ನಾಯಿಯನ್ನು ಬೌ ಬೌ ಎಂದೇ ಕರೆಯು ವರು. ಬೆಕ್ಕನ್ನು ಮಿಯಾಂವ್ [mew] ಎಂದು ಗುರುತಿಸುವರು, ಕಾಗೆಯನ್ನು ಕಾಕಾ ಎಂದು ಬೆರಳು ಮಾಡಿ ತೋರಿಸುವರು. ಹಸುವನ್ನು ಅಂಬಾ ಎಂದೂ ಕುರಿಯನ್ನು 'ಬ್ಯಾ' ಎಂದೂ ಟ್ರೈನನ್ನು ಜುಗ್‌ಜುಗ್ ಎಂದೂ ಅನ್ನುವರು. ಈ ಅನುಕರಣೆಯು ಆಟದಲ್ಲಿ ನಕ್ಕು ನಲಿದಾಡುವರು. ಆದರೆ ಆಲೋಚನಾ ಶಕ್ತಿ ಪ್ರಬಲವಾದಾಗ, ವಯಸ್ಸು ಬೆಳೆದಂತೆಲ್ಲಾ ಈ ಕ್ರಿಯೆ ನಿಂತುಹೋಗುತ್ತದೆಯಲ್ಲವೆ? ಒಂದುಭಾಷೆಯಲ್ಲಿ ಕೇವಲ ಅನುಕರಣೆಯಿಂದಲೇ ಸೃಷ್ಟಿಯಾದ ಪದಗಳೆಷ್ಟು? ಹೀಗೆ ಗಣಗಣ, whistle, gush, hiss, buzz-ಮುಂತಾದ ಪದಗಳು ತೀರ ಪರಿಮಿತ. ಹೀಗೆ ವಿಚಾರ ಮಾಡಿದಾಗ ಈ ಅನುಕರಣ ವಾಚಕತತ್ವ ಎಲ್ಲ ವೇಳೆ ಯಲ್ಲೂ ಅನ್ವಯವಾಗಲು ಸಾಧ್ಯವಾಗದೆ ಬಿದ್ದುಹೋ ಗುತ್ತದೆ. ಮತ್ತು ಕೆಲವು ಪ್ರಾ ಣಿ ಗ ಳು ಮಾಡುವ ಧ್ವನಿಗಳಿಂದ ಉಂಟಾಗಿರುವ ಕೆಲವು ಪದಗಳನ್ನೇಃಪ್ರಬಲ ವಾದ ಆಧಾರವೆಂದು ಹಿಡಿದು ಸಾಧಿಸುವುದು ಸರಿಯಲ್ಲ. ಈ ಬಗೆಯ ತೀರ ಕಡಮೆ ಸಂಖ್ಯೆಯ ಪದಗಳು ವಾಸನೆ-ಬುಡ - ಬೇರುಗಳಿಲ್ಲದ ಕೃತಕ ಹೂಗಳಿದ್ದಂತೆ; ಅವು ಅನುಕರಿಸುವ ಪದಗಳ ಹೊರತಾಗಿ ಅದಕ್ಕೆ ಮೀರಿದ ವಿಸ್ತಾರವಾದ ಅರ್ಥವನ್ನು ವ್ಯಕ್ತಪಡಿಸಲಾರವು.

2) Interjectional Theory: ಉದ್ಗಾರ ವಾಚಕಶಬ್ದೋತ್ಪತ್ತಿ ತತ್ವ ಅಥವಾ ಉದ್ಗಾರವಾಚಕ ತತ್ವ: ಈ ವಾದಕ್ಕೆ ಮನೋಭಾವಾಭಿವ್ಯಕ್ತಿ ಸಿದ್ಧಾಂತ, Tut-Tut Theory ಎಂದೂ, Pooh-Pooh Theory ಎಂದೂ ಕರೆಯುವ ವಾಡಿಕೆ ಇದೆ. ಅತ್ಯಂತ ನೋವಿನ, ಸಂಕಟ, ಆಶ್ಚರ್ಯ ಹಾಗೂ ಹೆದ ರಿಕೆಯ ಅಥವಾ ಆನಂದದ ಸಮಯಗಳಲ್ಲಿ ಮಾನವನ ಬಾಯಿಂದ ಮೂಡುವ ತೀಕ್ಷ್ಣವಾದ ಸಂವೇದನೆಯ ಉದ್ಗಾರಗಳಿಂದ ಭಾಷೆ ಹುಟ್ಟಿತೆಂಬ ವಾದವಿದು. ಭಾವ ನಿರ್ಭರದಿಂದಲೂ, ಭಾ ವಾ ವೇ ಶ ದಿಂ ದಲೂ ಬರುವ ಉದ್ಗಾರದ ಪದಗಳು-ಹೋ, ಹಾ! ಆಹಾ, ಅಯ್ಯೋ, ಅಮ್ಮಾ ಅಪ್ಪಾ, ಆಹ್, ಹೋ ಅಬ್ಬಾ ಇತ್ಯಾದಿ ಯಾದ ಉದ್ಗಾರವಾಚಿಗಳು ಭಾ ಷೆ ಯ ಲ್ಲಿಃ ಇರುವುದು ಕಡಿಮೆ. ತೃಪ್ತಿಯಿಂದ ಬಂದ ಶಬ್ದವಾದ-ೂ ತೇಗು

ಭಾಷೆಯಲ್ಲ. ಹೀಗಾಗಿ ಸತ್ಯಕ್ಕಿಂತಲೂ ಚಮತ್ಕಾರವೇ ಈ ವಾದದ ಸ್ವಾರಸ್ಯವೆಂದು ಇದನ್ನೂ ಸುಲಭವಾಗಿ ತಿರ ಸ್ಕರಿಸಿ ಪಕ್ಕಕ್ಕೆ ತಳ್ಳಿಬಿಡಬಹುದು. ಸಂವೇದನೆಯ ಉದ್ಗಾರಗಳು ಎಲ್ಲ ಭಾಷೆಗಳಲ್ಲೂ ಒಂದೇ ತೆರನಾಗಿಲ್ಲ; ಅಲ್ಲದೆ ಈ ತತ್ವದಲ್ಲಿ ಒಂದು ಕ್ರಮಬದ್ಧವಾದ ಐತಿಹಾ ಸಿಕ ಬೆ ಳ ವ ಣಿ ಗೆ ಯಿಲ್ಲ. "ಓವ್" ಎಂದು ಹೊಟ್ಟೆ ತುಂಬಿದವರು ಹೊಟ್ಟೆಯ ಮೇಲೆ ಕೈ ಆಡಿಸುತ್ತಾ ಹೇಳ ಬಹುದು; ಥೂ ಥೂ ಅಥವಾ ಛೀ ಛೀ ಎಂದು ತಾತ್ಸಾರ ಜುಗುಪ್ಸೆಗಳನ್ನು ಸೂಚಿಸಬಹುದು. ಮೊದಮೊದಲಲ್ಲಿ ಮಗು ಮಾಡುವ ಅಥವಾ ಹಿಂದೆ ಆದಿಮಾನವನ ಗೂ-ಗೂ [goo-goo] ಎಂಬ ಉದ್ಗಾರದಿಂದ good god ಎಂಬ ಪದಗಳೂ m, ಮ್ ಉ ದ್ಗಾ ರ ದಿಂ ದ mute, mystery, myophia (ಮೌನ) ಪದಗಳೂ, ಪ್ರ (ಪರ್) ಎಂಬುದರಿಂದ ಪ್ರಿಯ, ಫ್ರೆಂಡ್ (Friend) ಎಂಬ ಪದಗಳೂ ಬಂದುವೆಂದು ಹೇಳು ವರು.* ಆದರೆ ಇಂತಹ ಊಹೆಗಳಿಗೆ ಕೊನೆ ಎಲ್ಲಿ? ಈ ಮಾತುಗಳಲ್ಲಿ ಸತ್ಯಕ್ಕೂ ಮೀರಿದ ಚಮತ್ಕಾರವಿದೆ.

3) Nativistic Theory : ನಾದತತ್ವ ಅಥವಾ ಅನುರಣತತ್ವ.

ಈ ವಾ ದ ವ ನ್ನು Pathogenic theory ಎಂದೂ Ding-Dong t h e o r y ಎಂದೂ, Root theory (ಧಾತು ಸಿದ್ಧಾಂತ) ವೆಂದೂ ಕರೆ ಯುವರು. ಜರ್ಮನಿಯ ಪ್ರಾಧ್ಯಾಪಕ ಹೇಸ್ (He-yse) ಎಂಬಾತ ಮೊಟ್ಟಮೊದಲನೆಯ ಸಲ ಈ ವಾದ ವನ್ನು ತನ್ನ ಒಂದು ಭಾಷಣದಲ್ಲಿ ಹೇಳಿದ್ದನು. ಹೀಗೆ ಕೇವಲ ಉಪನ್ಯಾಸವೊಂದರಲ್ಲಿ ಪ್ರಸ್ತಾಪಿಸಿ ಹೇಸ್ ಕೈ ಬಿಟ್ಟ ವಿಚಾರವನ್ನು ಇವನ ಶಿಷ್ಯನಾದ ಡಾ||ಸ್ಟೆಂಥಾಲ್ ಪುಸ್ತಕ ರೂಪದಲ್ಲಿ ಪ್ರಕಟಿಸಿದನು.

ಪ್ರಪಂಚದ ಪ್ರತಿಯೊಂದು ಪದಾರ್ಥಕ್ಕೂ ತನ್ನದೇ ಆದ ಒಂದು ನಾದಕೋಶವಿರುತ್ತದೆ, ಒಂದರ ಶಬ್ದಕ್ಕೂ ಇನ್ನೊಂದಕ್ಕೂ ವ್ಯತ್ಯಾಸವಿರುತ್ತದೆ. ಜಗತ್ತಿನ ವಸ್ತು ಗಳನ್ನು ಆದಿಮಾನವ ಕಂಡಾಗ ಅವನ ಮನಸ್ಸಿನಲ್ಲಿ ಮೂಡಿದ ಭಾವನೆಗಳಿಗೆ ಧ್ವನಿಯ ಆ ಕಾ ರ ವ ನ್ನು ಕೊಡಲು ಪಟ್ಟ ಪ್ರಯತ್ನವೇ ಭಾಷೆಯೆಂಬರ್ಥದ ಈ

* The philosophy of speech : George Willis.

ವಾದವನ್ನು ಮುಂದಿಟ್ಟಾಗ ಮ್ಯಾಕ್ಸ್‌ಮುಲ್ಲರ್ ಕೂಡ ತಟ್ಟನೆ ಅಂಗೀಕರಿಸಿದನು, ಆದರೆ ಮುಂದೆ ಆ ಮಹನೀಯನೇ ಇದನ್ನು ನಿರರ್ಥಕವೆಂದು ತಳ್ಳಿಹಾಕಿದನು. ಯಾವುದಾದರೂ ಒಂದು ಲೋಹದ ಮೇಲೆ ಏಟು ಕೊಟ್ಟಾಗ ಅದರಿಂದ ಅಲೆಯಲೆಯಾಗಿ ನಾದಹೊಮ್ಮುತ್ತದೆ. ಹಾಗೆಯೇ ನಿಸರ್ಗದ ತುಂಬ ಎಲ್ಲೆಡೆಯಲ್ಲೂ ಈ ನಾದತರಂಗ ಹೊಮ್ಮುತ್ತದೆಯಾದ್ದರಿಂದ ಪ್ರಕೃತಿಯನ್ನು ಸುತ್ತುವರಿದ ಒಂದು ಅವ್ಯಕ್ತವೂ-ನಿಗೂಢವೂ ಆದ ನಿಯಮವಿರಬೇಕು. ಮತ್ತು ನಾದತರಂಗಕ್ಕೂ ಪದಗಳ ಅರ್ಥಕ್ಕೂ ಒಂದು ಅವರ್ಣನೀಯ ಹೊಂದಾಣಿಕೆ ಇದೆ. ಗೂಢವಾದ ಆಧ್ಯಾತ್ಮ ಸಾಮರಸ್ಯವಿದೆ. ಆ ರಹಸ್ಯತಮ ಸಂಬಂಧದ ಸ್ವಾಭಾವಿಕ ಪರಿವರ್ತನಗಳಿಂದ ಶಬ್ದೋತ್ಪತ್ತಿಯೆಂಬ ತತ್ವ. ಆ ನಿಯಮವೇ ಈ Ding Dong theory. ಭಾಷೆಯ ಆರಂಭಿಕ ಸ್ಥಿತಿಗೆ ಈ ವಾದ ಕೊಂಚಮಟ್ಟಿಗೆ ಅನ್ವಯವಾಗುತ್ತದೆ, ಸರಿಯೆ. zig-zag Jazz Dazzle, ಗಾನ; ಗೀತ, ಗೇಯ, ಗಂಟೆ, ಜಣಜಣ, ಠಿಣಠಿಣ ಇತ್ಯಾದಿ ಪದಗಳಲ್ಲಿ ಮೂಲಾರ್ಥದ ನಾದಾನುಕರಣೆಯಿದೆ. ಆದರೂ ಕೇವಲ ಅನುಕರಣೆಯಿಂದಲೇ ಭಾಷೆ ಮೂಡಿತೆಂಬುದು ಅಸಹಜ ಹಾಗೂ ಅಸಾಧ್ಯ. ಮಂಚು ಎಂಬ ಭಾಷೆಯಲ್ಲಿ ನಿಸರ್ಗ ಸಹಜ ಶಬ್ದಗಳ ಅನುಕರಣೆಯೇ ಬಹುಮಟ್ಟಿನ ಪದಗಳ ಜೋಡಣೆಗೆ ಕಾರಣವಾಗಿದೆಯಾದರೂ ಅಂಥ ಭಾಷೆಗಳು ಕಡಿಮೆ. ಆದುದರಿಂದಲೇ ಮುಂದೆ ಈ ವಾದದ ಜನಕ ಇದನ್ನು ತ್ಯಜಿಸಿದ್ದು!

4) Yo-he-ho-Theory. ನಿರಾಯಾಸ ತತ್ವ: ಶ್ರಮ ಪರಿಹಾರ ತತ್ವ.

ನ್ವ್ಯಾರ್ ಎಂಬಾತ ಈ ವಾದವನ್ನು ಪ್ರತಿಪಾದಿಸಿದುದರಿಂದ ಈ ತತ್ವವನ್ನು Noire's theory ಎಂಬ ಹೆಸರಿನಿಂದಲೂ ನಿರ್ದೇಶಿಸುವರು. ದೇಹದುಡಿಮೆಯಲ್ಲಿ ತೊಡಗಿರುವಾಗ ದುಡಿತದ ಆಯಾಸವನ್ನು ಮರೆಯಲು ಉಸಿರನ್ನು ಜೋರಾಗಿ ಬಿಡುತ್ತಾ ಶಬ್ದಗಳನ್ನು ಉಚ್ಚರಿಸುತ್ತಾನೆ. ಮೇಲಿನ ಮೂರು ತತ್ವಗಳಂತೆ ಈ ವಾದವೂ ಭಾಷೆಯ ಆರಂಭಸ್ಥಿತಿಗೆ ಮಾತ್ರ ಅನ್ವಯವಾಗುತ್ತದೆ. "ಪೂ-ಪೂ" ವಾದದ ಬಂಧುವಿನಂತೆ ಈ ವಾದವಿದೆ! ಮಾಂಸಖಂಡದ ಬಲ ಉಪಯೋಗಿಸಬೇಕಾದ ಸಂದರ್ಭಗಳಲ್ಲಿ ಉಸಿರಾಟ ಸುಲಭವಾಗಲು ಧ್ವನಿ ಉಚ್ಚಾರದ ಭಾಗಗಳು ಸ್ಪಂದಿಸುತ್ತವೆ. ಆ ರೀತಿಯ ಸ್ಪಂದನದಿಂದ ಬಗೆಬಗೆಯ ಶಬ್ದಗಳು ಹುಟ್ಟುತ್ತವೆ. ಅಂದರೆ ನಿಸರ್ಗ ಸಹಜಧ್ವನಿಯನ್ನು ಅನುಕರಿಸುವ ಪ್ರಜ್ಞಾಪೂರ್ವಕ ಪ್ರಯತ್ನ ಬೇಕಿಲ್ಲವೆಂಬುದೇ ಈ ತತ್ವದ ತಿರುಳು. ಆದರೆ ಉಳಿದೆಲ್ಲ ವಾದಗಳಂತೆ ಈ ವಾದವೂ ಅಸ್ವೀಕೃತವಾಯಿತು. ಹುಷ್ss. ಸ್ವಾಮಿ, ಅಬ್ಬಾ........

5) Sing-Song theory: ಸಂಗೀತ ಸಿದ್ಧಾಂತ

ಈ ವಾದದ ಸಾರಾಂಶವಿಷ್ಟು; ಭಾಷೆಯ ಹುಟ್ಟನ್ನು ಕುರಿತು ಡಾರ್ವಿನ್, ಸ್ಪೆನ್ಸರ್........

ಆದಿ ಮಾನವನ ಗಾನರೂಪಿಯಾದ ಹರ್ಷೋದ್ಗಾರವೇ ಭಾಷೆಯ ಮೂಲವೆಂಬ ಹೇಳಿಕೆ ಕೇಳುವುದಕ್ಕೆ ತಲೆದೂಗುವಂತಿದೆಯಾದರೂ ವಿಚಾರದ ಸಾಣೆಗೆ ಹಿಡಿದಾಗ ಪೊಳ್ಳುವಾದವಾಗಿ ಈ ನಾದವೂ ಕುಸಿದು ಹೋಗುತ್ತದೆ. ಇದನ್ನು ಪ್ರೇಮ ಸಿದ್ಧಾಂತವೆಂದೂ, ಸಂಗೀತ ಸಿದ್ಧಾಂತವೆಂದೂ ಕರೆಯುವರು; ಇಂಗ್ಲೀಷಿನಲ್ಲಿ ಈ ಸಿದ್ಧಾಂತಕ್ಕೆ Woo-Woo theory ಮತ್ತು Musical theory ಎಂಬ ಬೇರೆಬೇರೆ ಹೆಸರುಗಳೂ ಇವೆ

6) Ta-Ta theory ಟ-ಟ ಸಿದ್ಧಾಂತ.

ಭಾಷೆ ದೇಹದ ಅಂಗಾಂಗಗಳ ಚಲನೆಯ ಅನುಕರಣೆಯಿಂದ ಮೂಡಿತೆಂಬುದು ಈ ವಾದದ ತಿರುಳು. ಎಲ್ಲ ವಾದಗಳಿಗೂ ಮೊದಲೇ ಡಾರ್ವಿನ್ನನು ಧ್ವನ್ಯಂಗಗಳು ಅನೈಚ್ಛಿಕವಾಗಿ ಕೈಗಳು ಮಾಡುವ ಸನ್ನೆಗಳನ್ನು ಅನುಕರಿಸಲು ಮಾಡಿದ ಪ್ರಯತ್ನವೇ ಮಾತಿಗೆ ಮೂಲವೆಂಬ ವಿಚಾರವೊಂದನ್ನು ಮಂಡಿಸಿದ್ದನು ಈ ವಾದವೂ ಅವನ ಹೇಳಿಕೆಯನ್ನು ಪ್ರತಿಧ್ವನಿಸುತ್ತದೆ.

7) Wave theory: ತರಂಗ ಸಿದ್ಧಾಂತ Wellentheorie

ಜಗತ್ತಿನಲ್ಲಿ ಹೊಸಭಾಷೆಗಳೂ, ಉಪಭಾಷೆಗಳೂ ಹೇಗೆ ಅಸ್ತಿತ್ವಕ್ಕೆ ಬಂದುವೆಂಬುದನ್ನು ಕುರಿತು ವಿವೇಚಿ

ಸುತ್ತಾ ಕೆಲವು ವಿದ್ವಾಂಸರು ನಿಂತ ನೀರಿಗೆ ಒಂದು ಕಲ್ಲು ಅಥವಾ ಯಾವುದಾದರೂ ಒಂದು ಪದಾರ್ಥವನ್ನು ಎಸೆದರೆ ಆಗ ಒಂದಾದ ಮೇಲೆ ಒಂದರಂತೆ ಹತ್ತಾರು-ನೂರಾರು ಅಲೆಗಳು - ಸುರುಳಿಗಳು ದುಂಡಾಕಾರದಲ್ಲಿ ಕಾಣಿಸಿಕೊಳ್ಳುವಂತೆ ಭಾಷೆ-ಉಪಭಾಷೆಗಳೂ ಮೂಡಿವೆಯೆಂದು ಅಭಿಪ್ರಾಯಪಟ್ಟರು. ಈ ವಾದವನ್ನು ತರಂಗ ತತ್ವವೆಂದು ಕರೆಯುವರು. 1872 ರಲ್ಲಿ ಜೊಹಾನ್ಸ್ ಶ್ಮಿಡ್ (Johannas Schmidt) ಎಂಬಾತ ಈ ಸಿದ್ಧಾಂತವನ್ನು ಮೊದಲು ಪ್ರತಿಪಾದಿಸಿದನು.

8) Tree-stem theory: ವಂಶವೃಕ್ಷ ಸಿದ್ಧಾಂತ.

ಒಂದು ಭಾಷೆಯಿಂದ ಅದಕ್ಕೆ ಸಂಬಂಧಿಸಿದಂತೆ ಹಲವು ಭಾಷೆ-ಉಪಭಾಷೆಗಳು ಕಾಣಿಸಿಕೊಂಡುದಕ್ಕೆ ಕಾರಣ ಹುಡುಕುತ್ತಾ ಮತ್ತೆ ಕೆಲವರು ಒಂದೇ ಮರದ ಬುಡ-ಕಾಂಡದಿಂದ ಕೊಂಬೆ ರೆಂಬೆಗಳು ಮರಬೆಳೆದಂತೆಲ್ಲಾ ಕಾಣಿಸಿಕೊಳ್ಳುವಂತೆ ಒಂದೇ ಭಾಷೆಯಿಂದ ಅದಕ್ಕೆ ಸಂಬಂಧಿಸಿದ ಇತರ ನುಡಿಗಳು ಮೂಡಿವೆ ಎಂದು ಪ್ರತಿಪಾದಿಸಿದರು. ವೃಕ್ಷ-ಶಾಖೆಗಳಿಗೆ ಈ ವಿಚಾರವನ್ನು ಹೋಲಿಸಿರುವುದರಿಂದ ಇದನ್ನು ತರುಶಾಖಾತತ್ವವೆಂದು ಕರೆಯುವರು. ಇದನ್ನು ಇಂಗ್ಲೀಷಿನಲ್ಲಿ Pedigree theory ಎಂದೂ ಕರೆಯುವರು. 1866ರಲ್ಲಿ ಆಗಸ್ಟ್-ಶ್ಲೀಷರ್ August Schleicher) ಎಂಬಾತ ಈ ಸಿದ್ಧಾಂತವನ್ನು ರೂಪಿಸಿದನು. ಇದನ್ನು 'Stammbaumtheorie' ಎಂದು ಆತ ಕರೆದಿದ್ದನು.

9) Divine Origin Theory: ದೈವೀ ಉತ್ಪತ್ತಿ ಸಿದಾಂತ್ಧ

ಭಾಷೆಯ ಉತ್ಪತ್ತಿಯನ್ನು ಕುರಿತು ಬಂದಿರುವ ಸಿದ್ಧಾಂತವಾದಗಳಲ್ಲಿ ಇದು ಬಹಳ ಹಳೆಯ ಅಭಿಪ್ರಾಯ. ಎಲ್ಲ ದೇಶಗಳಲ್ಲೂ ಈ ಭಾವನೆ ಮನೆಮಾಡಿರುವುದು ಮನನೀಯವಾದುದು. ಭಗವಂತನ ದಿವ್ಯಾನುಗ್ರಹ ರೂಪದಲ್ಲಿ ಮಾನವನಿಗೆ ದೊರೆತಿರುವ ಅನೇಕ ಅನುಕೂಲಗಳಂತೆ ಈ ಭಾಷೆಯೂ ದೇವರ ಪ್ರಸಾದವೆಂದು ಈ ವಾದದವರ ನಂಬುಗೆ. ಈಶ್ವರನಿಂದ ಸಂಸ್ಕೃತ ಹುಟ್ಟಿತೆಂದೂ, ಅದರಿಂದ ಅದು ದೈವವಾಣಿಯೆಂದೂ ಕರೆವರು. ಸಂಸ್ಕೃತ ವ್ಯಾಕರಣವೂ ಶಿವನ ನಟನದಿಂದ ಮೂಡಿತಂತೆ.

ನೃತ್ತಾವಸಾನೆ ನಟನಾಧಿರಾಜೋ
ನನಾದ ಢಕ್ಕಾಂ ನವಪಂಚವಾರಂ।
ವೃದ್ಧರ್ತು ಕಾಮಃ ಸನಕಾದಿಸಿದ್ಧಾನ್
ಏತತ್ ವಿಮರ್ಶೇ ಶಿವಸೂತ್ರ ಜಾಲಾತ್॥

ಬೌದ್ಧರು ಪಾಳಿಯನ್ನೂ, ಜೈನರು ಅರ್ಧಮಾಗಧಿಯನ್ನೂ, ಯೆಹೂದ್ಯರು ಹೀಬ್ರು ಭಾಷೆಯನ್ನೂ ದೈವ ಅಥವಾ ಧಾರ್ಮಿಕ ಕಾರಣಗಳಿಂದಾಗಿ (ಆದಿ ಅಥವಾ ಅನಾದಿ) ಭಾಷೆಯೆಂದು ಉಲ್ಲೇಖಿಸಿದ್ದಾರೆ. ಈ ವಾದಕ್ಕೆ ಸಂಬಂಧಪಟ್ಟ ಅನೇಕ ಮಾತುಗಳು ಮತ್ತೆ ಮತ್ತೆ ಈ ಹೊತ್ತಗೆಯ ಬೇರೆಬೇರೆ ಕಡೆಗಳಲ್ಲಿ ಬರುವುದರಿಂದ ಇದಕ್ಕೆ ಸೇರಿದ ಹೆಚ್ಚಿನ ಉದಾಹರಣೆಗಳು ಆಯಾ ಎಡೆಗಳಲ್ಲಿ ನೋಡಬಹುದು.

10) ಸ್ವೀಕಾರವಾದ ಅಥವಾ ನಿರ್ಣಯ ಸಿದ್ಧಾಂತಃ Agreement Theory—

ಈ ತತ್ವವನ್ನು ಪ್ರತೀಕವಾದವೆಂದೂ, ಸಾಂಕೇತ ಉತ್ಪತ್ತಿ ಸಿದ್ಧಾಂತವೆಂದೂ ಅಥವಾ ಸಂಕೇತವಾದವೆಂದೂ, ಇನ್ನೂ ಇತರ ಹೆಸರುಗಳಿಂದಲೂ ಕರೆಯುವರು.

ಮಾನವ ಆರಂಭದಲ್ಲಿ ಕೈಗಳಿಂದ ಆಗಬೇಕಾದ ಕೆಲಸ ಮೂಲದ ಸಂಕೇತದಂತೆ ನೋಡಿ ಕೋಪಗೊಂಡು ಅತ್ಯಗತ್ಯವಾದ ವಸ್ತುಗಳಿಗೆ ಮತ್ತು ಕೆಲಸಗಳಿಗೆ ಸಾಂಕೇತಿಕ ಶಬ್ದಗಳನ್ನು ಸ್ವೀಕರಿಸಿದನು. ಪ್ರತೀಕಧ್ವನಿ, ಸಾಂಕೇತಿಕ ಹೆಸರು (ಶಬ್ದ) ಗಳನ್ನು ಮಾನವ ಹೀಗೆ ಸ್ವೀಕರಿಸಿದುದೇ ಭಾಷೆಯ ಹುಟ್ಟಿಗೆ ಮೂಲವಾಯಿತೆಂಬುದು ಈ ಸಿದ್ಧಾಂತದ ಸಾರ.

ಉಳಿದ ಎಲ್ಲ ಮತ ಮತ್ತು ಸಿದ್ಧಾಂತಗಳಂತೆ ಈ ವಾದವೂ ಹುರುಳಾಗಲೀ ತಿರುಳಾಗಲೀ ಇಲ್ಲದೆ ಕುಸಿದು ಹೋಯಿತು. ಮೊದಲು ಭಾಷೆಯಿಲ್ಲದೆ ಮಾನವ

ಸಾಂಕೇತಿಕ ಹೆಸರು ಅಥವಾ ಶಬ್ದಗಳನ್ನು ಹೇಗೆ ಕೊಡಲು ಸಾಧ್ಯವಾಯಿತು? ಎಂದು ಪ್ರಶ್ನಿಸಿದರೆ ಈ ಸಿದ್ಧಾಂತ ಎಷ್ಟು ನಿರರ್ಥಕವೆಂದು ತಿಳಿಯುತ್ತದೆ.

11) ಇಂಗಿತ ಸಿದ್ಧಾಂತ: Gestural Theory.

ಪಾಲಿನೇಷಿಯಾ ಭಾಷೆಗಳ ಪರಮ ಪಂಡಿತನಾದ ಡಾ॥ ರಾಯೆಕೊ ಎಂಬುವನು ಈ ವಾದವನ್ನು ಪ್ರತಿಪಾದಿಸಿದನು. ಡಾರ್ವಿನ್, ರಿಚರ್ಡ್ ಮುಂತಾದವರೂ ಈ ತತ್ವವನ್ನು ಮಾಡಿದ್ದುಂಟು. ತನ್ನ ಪುಸ್ತಕ "Human speech" ಎಂಬುದರಲ್ಲಿ ರಿಚರ್ಡ್ ಈ ವಾದವನ್ನು Oral gesture theory ಅಥವಾ ಮೌಖಿಕ ಇಂಗಿತ ಸಿದ್ಧಾಂತವೆಂದು ಕರೆದು ಪ್ರಸ್ತಾಪಿಸಿದ್ದಾನೆ. ಐಸ್‌ಲ್ಯಾಂಡಿಕ್ ಭಾಷೆಗಳ ವಿದ್ವಾಂಸನಾದ ಅಲೆಕ್ಸಾಂಡರ್ ಜೊಹಾನ್‌ಸನ್ ಎಂಬುವನೂ ಈ ಸಿದ್ಧಾಂತವನ್ನು ಸ್ವೀಕರಿಸಿದ್ದನಲ್ಲದೆ ಈ ವಾದದ ಉಪಷ್ಟಂಬನೆಗಾಗಿ ಹೀಬ್ರು, ಚೀನೀ, ತುರ್ಕಿ, ಭಾಷೆಗಳಿಂದ ಆಧಾರಗಳನ್ನು ಒದಗಿಸಿದ. ಭಯ, ಕ್ರೋಧ, ಸುಖ-ದುಃಖ, ಹಸಿವು, ಬಾಯಾರಿಕೆ ಆದ ಸಂದರ್ಭಗಳಲ್ಲಿ ಭಾವವ್ಯಂಜಕ ಧ್ವನಿಗಳನ್ನು ಮಾಡುತ್ತಾನೆ; ಅಲ್ಲಿಂದ ಅನುಕರಣಾತ್ಮಕ ಶಬ್ದಗಳನ್ನು ಮಾಡುವನು. ಇದರ ಮುಂದಿನ ಮೆಟ್ಟಿಲೇ ಇಂಗಿತಾತ್ಮಕ ಶಬ್ದ ಮಾಡುವುದು. ಮೌಖಿಕ ಇಂಗಿತ ಸಿದ್ಧಾಂತವೆಂಬುದೂ (Oral gesture Theory) ಈ ಸಿದ್ಧಾಂತಕ್ಕೆ ಸೇರಿದುದು.

12) ಸಂಪರ್ಕ ಸಿದ್ಧಾಂತ: Contact Theory

ಈ ವಾದವನ್ನು ಪ್ರತಿಪಾದಿಸಿದವನು ಮನೋವಿಜ್ಞಾನಿಯಾದ ಜಿ. ರೆವೆಜ್ (Revesz). ಇಲ್ಲಿ ಸಂಪರ್ಕವೆಂದರೆ ಸಾಮಾಜಿಕ ಜೀವನ. ಸಾಮಾಜಿಕರು ಒಬ್ಬರು ಇನ್ನೊಬ್ಬರೊಡನೆ ವ್ಯವಹರಿಸುವಾಗ ಭಾವನಾತ್ಮಕ ಸಂಪರ್ಕ (emotional contact), ವೈಚಾರಿಕ ಸಂಪರ್ಕ (intellectual contact) ಒಡಮೂಡುತ್ತವೆ. ಭಾಷೆ ಈ ಸಂಪರ್ಕದ ಫಲ. ಮೊದಲು ಕ್ರಿಯೆ, ತರುವಾಯ ಸಂಜ್ಞೆ.

13) ಏಕಪರಿವಾರ ಸಿದ್ಧಾಂತ: Monogenesis Theory—

ಇಂದು ಇದು ಕೂಡ, ಉಳಿದ ಎಲ್ಲ ಸಿದ್ಧಾಂತಗಳಂತೆ ತಪ್ಪಾದ ತತ್ವವೆಂದು ತಳ್ಳಿಸಿಕೊಂಡಿದೆ, ಭಾಷಾ ವಿಜ್ಞಾನಿಗಳು ಈ ವಾದವನ್ನು ನಿರಾಧಾರವೆಂದು ನೂಕಿದ್ದಾರೆ.

ಜಗತ್ತಿನ ಎಲ್ಲ ಜೀವಂತ ಭಾಷೆಗಳೂ ಒಂದು ಮೂಲ (ತಾಯಿ) ಭಾಷೆಯಿಂದ ಹುಟ್ಟಿ ಕಾಲಾಂತರದಲ್ಲಿ ಬೇರೆ ಬೇರೆಯಾಗಿ, ಒಂದೇ ಕಾಂಡದ ಹಲವು ಟಿಸಲುಗಳಾಗಿ ಕವಲೊಡೆದಿವೆ. ಎಂಬುದು ಈ ಸಿದ್ಧಾಂತದ ತಿರುಳು.

ಹೀಗಾಗಿ ಭಾಷೆ ಸನ್ನೆ ಸಂಕೇತಗಳಿಂದ ಮೂಡಿತೋ ಅನುಕರಣೆ ಉದ್ಗಾರಗಳಿಂದ ರೂಪುಗೊಂಡಿತೋ:- ಎಂಬ ವಿಚಾರ-ವಾದಗಳೆಲ್ಲ ಆಧಾರಗಳ ಕೊರತೆಯಿರುವುದರಿಂದ ಸಹಜವಾಗಿಯೇ ವಿಫಲಗೊಂಡಿವೆ. ಭಾಷೆಯು ಉಗಮದ ರಹಸ್ಯ, ಅಭೇದ್ಯ, ಅಗೋಚರವಾದರೂ, ಅದು ಕ್ರಮೇಣ ಬೆಳೆಯಿತೆಂಬುದು ನಿಸ್ಸಂದೇಹ. ಕೂಗಿನಿಂದ ಕರೆಯುವರೆಗೆ ಕ್ರಮೇಣ ಮಾನವ ಮಾತು ಕಲಿತ. ಚಿತ್ರಲಿಪಿ ಮಾತಿಗಿಂತ ಮುಂಚೆ ಬಂದಿರಬೇಕು. ಮಾನವ ಶತಮಾನಗಳಿಂದ ಸಾಧಿಸಿದ ಸಂಸ್ಕೃತಿ-ಸಾಹಸಗಳ ಸಾರವೆಲ್ಲವೂ ಅಷ್ಟೇ ಪ್ರಾಚೀನವಾದ ಭಾಷೆಯಲ್ಲಿ ಸಮಾವೇಶವಾಗಿರುವುದು ನಿಜ. ಅಷ್ಟು ಹೇರಳ ಮಾತಿನ ಮೂಲವನ್ನು ಕೆದಕುವ ಬೆದಕುವ ಪ್ರಯತ್ನವೆಲ್ಲಾ ವ್ಯರ್ಥವಾಗಿದೆ, ಹಳೆಯ ವಾದಗಳು ಹಳಸಿ ಹೋಗಿವೆ. ಆದುದರಿಂದಲೇ ಕೆಲವರು ಹಾಸ್ಯಪೂರ್ಣವಾಗಿ ದೇವಮೂಲ, ನದೀಮೂಲ, ಋಷಿಮೂಲ, ಗುರುಮೂಲಗಳಂತೆ ಭಾಷೆಯ ಮೂಲವನ್ನೂ ಹುಡುಕಬಾರದೆಂದು ಹೇಳುವರು! "The origin of language is buried far back in man's past and we shell in all likelihood never learn the exact circumstances that give rise to it" ಎಂದು ಭಾಷಾ ವಿದ್ವಾಂಸರೊಬ್ಬರು ತಿಳಿಸಿದ್ದಾರೆ * ಭಾಷೆ ಮಾನವ ನಿರ್ಮಿತವೋ. ದೈವಸೃಷ್ಟಿಯೋ ಎಂಬ ಚರ್ಚೆ ಅನಗತ್ಯ. ಇದನ್ನು ಎರಡೂ ಸರಿಯೆಂದೂ ವಾದಿಸಬಹುದು, ಆದರೂ ಮಾನವ ನಿರ್ಮಿತನೆಂಬುದು ಹೆಚ್ಚು ಸತ್ಯ.

ಭಾಷೆ ದೈವಸೃಷ್ಟಿಯೋ? ಮಾನವ ನಿರ್ಮಿತವೋ? ಎಂಬ ವಾದದಂತೆ ಜಗತ್ತಿನ ಎಲ್ಲ ಭಾಷೆಗಳೂ ಒಂದೇ ಮೂಲದಿಂದ ಬಂದಿವೆಯೋ? ಬೇರೆಬೇರೆಯಾಗಿ ಭಾಷೆ

* Lectures in Linguistics : P. 10

ಗಳು ಬೆಳೆದವೆ? ಮೂಲ ಅಥವಾ ಮೊದಲಿನ ಭಾಷೆ ಯಾವುದು? ಎಂಬ ವಾದವೂ ಕೆಲವುಕಾಲ ನಡೆಯಿತು. ಕೆಲವರು ಮಾನವಕುಲಕ್ಕೆಲ್ಲಾ ಮೊದಲು ಇದ್ದುದು ಒಂದೇ ಭಾಷೆಯೆಂದೂ, ದೈವಶಾಪದಿಂದ ಬೇರೆಬೇರೆ ಭಾಷೆಗಳನ್ನು ತರುವಾಯ ಆಡತೊಡಗಿದರೆಂದೂ ಹೇಳಿದ್ದಾರೆ; ಬೇಬಲ್ ಗೋಪುರ (Tower of Babel)ದ ಕತೆ ಇದನ್ನೇ ಘೋಷಿಸುತ್ತದೆ. ಹೀಬ್ರೂ ಭಾಷೆಯೇ ಪ್ರಪಂಚದ ಮೂಲಭಾಷೆಯೆಂದು ಸುಮಾರು ಜನರು ವಾದಿಸಿದರು. ಹೀಬ್ರು ಸರಳ ಭಾಷೆ, ಅಷ್ಟೇ ಸಮರ್ಥ ಭಾಷೆ, ಭಾವಾಭಿವ್ಯಕ್ತಿಗೆ ಸುಭಗ-ಸುಲಭ ಭಾಷೆ, ಬಹು ಮುಖ್ಯವಾದ ಒಟ್ಟು ಧಾತುಗಳು ಈ ಭಾಷೆಯಲ್ಲಿ ಸುಮಾರು 500 ಪದಗಳಲ್ಲಿ ಎರಡಕ್ಕಿಂತಲೂ ಅಧಿಕವಿರುವುದಿಲ್ಲ-ಆದುದರಿಂದ ಇದೇ ಮೂಲ ಭಾಷೆಯೆಂದರು! ಸ್ವರ್ಗದಲ್ಲಿ ಆಡಂ ಮತ್ತು ಈವ್ ಆಡುವ ಹಾಗೂ ಜಗತ್ತಿನ ಅತ್ಯಂತ ಪ್ರಾಚೀನ ಭಾಷೆಯೆಂದರೆ ಐರಿಷ್ ಭಾಷೆಯೆಂದು ಇನ್ನೊಂದು ವಾದ. "ಡಚ್" ಭಾಷೆಯೇ ಪ್ರಪಂಚದ ಭಾಷೆಗಳಿಗೆಲ್ಲಾ ಮೂಲವೆಂದು ಮತ್ತೊಂದು ವಾದ. ದ್ರಾವಿಡ ಭಾಷೆಗಳೇ ವಿಶ್ವದ ಎಲ್ಲ ಭಾಷೆಗಳಿಗೂ ತವರುಮನೆಯೆಂದು ಮಗದೊಂದು ಅಭಿಪ್ರಾಯ. ದೈವ ಸೃಷ್ಟಿಯೂ, ಗೀರ್ವಾಣವಾಣಿಯೂ ಆದ ಸಂಸ್ಕೃತ ಭಾಷೆಯೇ ಎಲ್ಲ ಭಾಷೆಗಳಿಗೂ ನೆಲೆಯೆಂದು ಭಾರತೀಯರ ಅಭಿಪ್ರಾಯ-ಹೀಗೆಯೇ ವೆಲ್ಷ್, ಇಂಗ್ಲಿಷ್ ಇತ್ಯಾದಿ ಭಾಷೆಗಳ ಬಗೆಗೂ ಹೇಳಿದ್ದಾರೆ. ಇಂತಹ ಮಾತುಗಳಿಗೆ ಏನು ಹೇಳುವುದು? ಸರಿಯಾಗಿ ಹೇಳಬೇಕೆಂದರೆ ಒಂದೇ ಉತ್ತರ 'ಸರ್ವಭಾಷಾಮಯಿ ಸರಸ್ವತಿ' ಎಂಬುದು.

ಮನುಷ್ಯ ಬಂದ ಮೇಲೆ ಭಾಷೆ ಬಂದಿರಬೇಕು, ಅವನೊಡನೆ ಅದೂ ಬೆಳೆದಿರಬೇಕು. ಮಾನವನಷ್ಟೇ ಭಾಷೆಯೂ ಪ್ರಾಚೀನ. ಭಾಷೆಯ ಹುಟ್ಟಿನ ಗುಟ್ಟನ್ನು ಬೇಧಿಸಲು ಹೊರಟ ಪ್ರಯತ್ನಗಳು ನಿಷ್ಫಲವಾದುವು. ಜಗತ್ತಿನ ಭಾಷೆಗಳು ಒಂದೇ ಮೂಲದಿಂದ ಬಂದವೆ ಅಥವಾ ಭಿನ್ನಮೂಲಗಳಿಂದ ಮೂಡಿದುವೆ ಎಂದು ಹುಡುಕುವ ಪ್ರಯತ್ನಗಳು ನಿಷ್ಫಲವಾದವು. ಆದರೂ ಅವರ ಪ್ರಯತ್ನ ಶ್ಲಾಘನೀಯವಾಗಿದ್ದು ಮುಂದೆ ಭಾಷೆಯ ಬೆಳವಣಿಗೆಯನ್ನು ಕುರಿತು ನಡೆಸಿದ ಕೆಲಸಗಳು ಫಲದಾಯಕವಾಗುವಂತೆ ಮಾಡಿದವು, ಭಾಷೆಯ ಬಗೆಗೆ ಇದ್ದ ಮೂಢನಂಬಿಕೆಗಳನ್ನು ಓಡಿಸಿದವು. ಇಂಗ್ಲೆಂಡ್ ದೇಶದಲ್ಲಿ ಜೊಹಾನ್ ಗಾಟ್ ಫ್ರೀಡ್ ಹರ್ಡರ್ ಎಂಬುವನು ಬರ್ಲಿನ್ ಅಕಾಡೆಮಿಯಿಂದ ಪ್ರಶಸ್ತಿಪಡೆದ ತನ್ನ ಸುಪ್ರಸಿದ್ಧ ಭಾಷಾಪ್ರಬಂಧದ ಮೂಲಕ, ಅದುವರೆಗೂ ಭಾಷೆಯ ವಿಚಾರದಲ್ಲಿ ಕವಿದ ವರಲ್ಲೂ ಇದ್ದ ಕುರುಡು ನಂಬಿಕೆಯನ್ನು ಬಡಿದು ಓಡಿಸಿ, ಭಾಷೆ ದೈವ ಸೃಷ್ಟಿಯಲ್ಲ, ದೈವದತ್ತ ವಿರಬಹುದು ಮಾನವ ತನ್ನ ಅನುಕೂಲಕ್ಕಾಗಿ ರೂಪಿಸಿಕೊಂಡ ಒಂದು ಸುಸಂಬದ್ಧ ಧ್ವನಿ ವ್ಯವಸ್ಥೆಯೆಂದು ಪ್ರತಿಪಾದಿಸಿದನು.* ಈ ಪ್ರತಿಭಾಶಾಲಿಯ ಪ್ರಭಾವ ಗಯಟೆ ಕವಿಯ ಮೇಲೂ, ರಮ್ಯಪಂಥದವರ ಮೇಲೂ ವಿಶೇಷವಾಗಿಯೇ ಆಯಿತಲ್ಲದೆ ಅಷ್ಟೇ ವರ್ಚಸ್ಸು ಭಾಷಾ ಶಾಸ್ತ್ರದ ಬಗ್ಗೆ ಅಭ್ಯಾಸ ಮಾಡುವವರ ಮೇಲೂ ದೇಶಭಾಷಿಗಳ ಕಡೆಗೆ ತಿರುಗಿಸಿದನು. ಹೀಬ್ರು ಭಾಷೆ ಸ್ವರ್ಗದಲ್ಲಿರುವ ಜನರಾಡುವ ಭಾಷೆಯೆಂದು ಜನ ಭಾವಿಸಿದ್ದರೂ ಕ್ರಮೇಣ ಆ ಭಾಷೆಯ ಅಭ್ಯಾಸ ಹೆಚ್ಚಿನ ವಿಷಯಗಳನ್ನು ಬೆಳಕಿಗೆ ತಂದಿತು. ಹೀಬ್ರೂ ಭಾಷೆಯನ್ನು ಬಲದಿಂದ ಎಡಕ್ಕೆ ಬರೆಯುತ್ತಿದ್ದರು. ಸಂಸ್ಕೃತ-ಹೀಬ್ರು ಇವೆರಡೂ ಭಾಷೆಗಳ ಪರಿಚಯ ಭಾಷಾಶಾಸ್ತ್ರದ ಬೆಳವಣಿಗೆಗೆ ಸ್ಫೂರ್ತಿಯನ್ನಿತ್ತವು. ಎಲ್ಲ ದೇಶದ ಭಾಷಾಶಾಸ್ತ್ರಕಾರರೂ ಈ ಹೊಸಸಂಶೋಧನೆಯಲ್ಲಿ ತೊಡಗಿದರು. ಭಾಷಾ ಕ್ಷೇತ್ರದಲ್ಲಿ ಸಂಶೋಧನೆಗಾರಂಭಿಸಿದ ವಿದ್ವಾಂಸರಲ್ಲಿ ಕೆಲವು ಪ್ರಮುಖ ವಿಭಾಗಗಳನ್ನು ಇಲ್ಲಿ ಹೆಸರಿಸಬಹುದು 1) London School: ಲಂಡನ್ ಶಾಖೆ: ಡೇನಿಯಲ್ ಜೋನ್ಸ್ ಮೊದಲಾದವರು. 2) Prague School: ಪ್ರಾಗ್ ಶಾಖೆ: ಜೆಕ ಸ್ಲೊವಿಕೆಯಾದ ರಾಜಧಾನಿ ಪ್ರಾಗ್ ಗುಂಪಿಗೆ ರಷ್ಯ ಹಾಗೂ ಫ್ರೆಂಚ್ ಭಾಷಾ ಶಾಸ್ತ್ರಕಾರರೂ ಸೇರುವರು. ಉದಾಹರಣೆಗೆ ಎನ್. ಎಸ್. ಟ್ರುಬೆಟ್ಸ್ಕಾಯ್ (N. S. Turbetskoi) ರೋಮನ್ ಜಾಕೊಬ್‌ಸನ್ ಮೊದಲಾದವರು. 3) American School: ಅಮೇರಿಕ ಶಾಖೆ: ಎಡ್ವರ್ಡ್ ಸಪೀರ್, ಲಿಯೊನಾರ್ಡ್ ಬ್ಲೂಮ್ ಫೀಲ್ಡ್ ಮೊದಲಾದವರು ಈ ಗುಂಪಿನ ಸದಸ್ಯರು. 4) ಜರ್ಮನ್ ಶಾಖೆ (German School) ಫ್ರಾನ್ಜ್‌ಬಾಪ್ ಇತ್ಯಾದಿ.

* Origin of Language : Johann Gottfried Herder : 1772

# ಮಾಣಿಕ್ಯ ವಾಚಕ ಸ್ವಾಮಿಗಳು

ಪಂ॥ ಪಿ. ಜಿ. ಶ್ರೀನಿವಾಸನ್, ಬಿ.ಎಸ್‌ಸಿ.,

ಶೈವ ಸಿದ್ಧಾಂತದ ಹಿರಿಯರು ನಾಲ್ವರೆಂದು ಹಿರಿಯರು ತಿಳಿಸಿರುತ್ತಾರೆ. ಅವರು 'ಅಪ್ಪರ್' ಎಂಬ ವಾಗೀಶರು, 'ಜ್ಞಾನ ಸಂಬಂಧರ್' ಎಂಬುವರು, ಆರೂರರೆಂಬ ಸುಂದರ ಮೂರ್ತಿ ಸ್ವಾಮಿಗಳು ಮತ್ತು ತಿರುವಾದವೂರರೆಂಬ ಮಾಣಿಕ್ಯ ವಾಚಕರು.

ಮಾಣಿಕ್ಯವಾಚಕರ್ ಎಂಬುದು ಈಶ್ವರನಿಂದ ದಯಪಾಲಿಸಲ್ಪಟ್ಟ ಬಿರುದು. ಈ ಬಿರುದು ಪಡೆದವರಿಗೆ ತಾಯಿ ತಂದೆಯರಿಟ್ಟ ಹೆಸರು ಇಂಥದು ಎಂದು ಸ್ಪಷ್ಟವಾಗಿ ತಿಳಿದಿಲ್ಲ. ಇವರ ತಾಯಿಯ ನಾಮಧೇಯ ಶಿವಜ್ಞಾನವತಿಯೆಂದೂ ತಂದೆಯ ಹೆಸರು ಶಂಭು ಪಾದಾಚಾರ್ಯರೆಂದೂ ತಿಳಿದುಬಂದಿದೆ. ಹಾಲಾಸ್ಯ ಮಾಹಾತ್ಮ್ಯವೆಂಬ ಗ್ರಂಥದಲ್ಲಿ ತಂದೆಯ ಹೆಸರು ಸುಂದರನಾಥರೆಂದು ಇದೆ. ಇವರು ಆರಾಧ್ಯ ಕುಲಕ್ಕೆ ಸೇರಿದವರೆಂದು ನವೀನ ಸಂಶೋಧಕರು ಅಭಿಪ್ರಾಯ ಪಡುತ್ತಾರೆ.

ದಕ್ಷಿಣ ದೇಶವು, ಅದರಲ್ಲೂ ಕಾವೇರೀ, ವೈಗೈ, ತಾಮ್ರಪರ್ಣೀ ಮುಂತಾದ ನದಿಗಳು ಪ್ರವಹಿಸುತ್ತಿರುವ ಪ್ರದೇಶವು ಆಚಾರ, ಸದ್ವರ್ತನೆ, ನಯ, ವಿನಯಾದಿ ಸದ್ಗುಣಗಳುಳ್ಳ ಜನರಿರುವರೆಂದು ಪ್ರಖ್ಯಾತವಾದುದು. ಇದನ್ನು ಪೂರ್ವ ಕಾಲದಲ್ಲಿ ಚೇರ, ಚೋಳ, ಪಾಂಡ್ಯರು ಆಳುತ್ತಿದ್ದರು. ಪಾಂಡ್ಯರು ತಮಿಳು ಸಂಘಗಳನ್ನೇರ್ಪಡಿಸಿ ಉತ್ತಮ ವಿದ್ವಾಂಸರಿಂದ ಭಾಷೆಯನ್ನು ಬೆಳೆಸಿದವರು. ಈಶ್ವರ, ಷಣ್ಮುಖಾದಿ ದೇವರುಗಳೂ ಅಗಸ್ತ್ಯಾದಿ ಮಹರ್ಷಿಗಳೂ ಆದಿ ಸಂಘದಲ್ಲಿ ಸದಸ್ಯರಾಗಿದ್ದು ತಮಿಳು ಭಾಷೆಯನ್ನು ಬೆಳೆಸಿದರೆಂದು ಹೇಳಲಾಗಿದೆ.

ಪಾಂಡ್ಯರ ರಾಜಧಾನಿ ಮಧುರೆ ಸಾಕ್ಷಾತ್ ಪಾರ್ವತೀದೇವಿಯೇ ರಾಜ್ಞಿಯಾಗಿ ಪಾಂಡ್ಯ ದೇಶವನ್ನು ಆಳಿರುತ್ತಾರೆ. ಮಧುರೆಗೆ 'ಕೂಡಲ್' ಎಂಬ ಹೆಸರಿದೆ. ಅಲ್ಲಿ ಈಶ್ವರನು ಚೊಕ್ಕನಾಥನೆಂಬ ನಾಮಧೇಯ ದೊಡಗೂಡಿ ರಾರಾಜಿಸುತ್ತ ಭಕ್ತರನ್ನು ರಕ್ಷಿಸುತ್ತಿರುವನು. ಅಂಬಿಕೆಯ ಹೆಸರು ಮೀನಾಕ್ಷಿ. ಈ ಮಧುರಾ ನಗರಕ್ಕೆ ಏಳು ಮೈಲಿ ದೂರದಲ್ಲಿ, ವೈಗೈ ನದೀ ತೀರದಲ್ಲಿರುವ "ತಿರುವಾದವೂರ್" ಎಂಬ ಸ್ಥಳದಲ್ಲಿ ಸ್ವಾಮಿಗಳು ಅವತರಿಸಿದರು. "ತಿರು" ಎಂಬುದು "ಶ್ರೀ" ಶಬ್ದದ ತಮಿಳು ಮಾತು.

ಮಗನಿಗೆ ಚಿಕ್ಕಂದಿನಲ್ಲಿ ಮಾಡಬೇಕಾದ ಸಂಸ್ಕಾರಾದಿಗಳನ್ನೆಲ್ಲ ಮಾಡಿ ಶಾಲೆಗೆ ಅಧ್ಯಯನಕ್ಕಾಗಿ ಸೇರಿಸಿದರು ತಂದೆ. ಚುರುಕಾದ ಬುದ್ಧಿ ಶಕ್ತಿಯನ್ನು ಪಡೆದಿದ್ದ ಸ್ವಾಮಿಗಳು ಎಲ್ಲ ಕಲೆಗಳನ್ನೂ ಅಧ್ಯಯನ ಮಾಡಿ ಪರಿಣತರಾದರು. ತಮಿಳಿನ ಅತ್ಯುತ್ತಮ ನೀತಿ ಶಾಸ್ತ್ರ ಕರ್ತೃವಾದ ತಿರುವಳ್ಳುವರ್ ಹೇಳಿರುವಂತೆ, ಕಲಿತುದರ ಪ್ರಯೋಜನ ಈಶ್ವರನಲ್ಲಿ ಭಕ್ತಿಯಿಡುವುದೆಂದು ಕಂಡು ಭಕ್ತರಾದರು; ಉತ್ತಮ ಶೀಲರಾದರು; ಒಳ್ಳೆಯ ವ್ಯವಹಾರಜ್ಞರಾದರು. ಇವರ ಹೆಸರು ರಾಜನನ್ನು ಮುಟ್ಟಿತು.

ವಿದ್ಯಾವಂತರೂ ಶೀಲ ಸಂಪನ್ನರೂ ಆದ "ತಿರುವಾದವೂರ"ರನ್ನು ಅರಿಮರ್ದನ ಪಾಂಡ್ಯನೆಂಬ ರಾಜನು

ಕರೆದು ಸತ್ಕರಿಸಿ ತನ್ನ ಪ್ರಥಮ ಸಚಿವರಾಗಿ ಸಹಾಯ ಮಾಡಬೇಕೆಂದು ಪ್ರಾರ್ಥಿಸಿದನು. ಅದನ್ನಂಗೀಕಾರ ಮಾಡಿದ ಸ್ವಾಮಿಗಳು ಅತ್ಯುತ್ತಮ ರೀತಿಯಲ್ಲಿ ಅಮಾತ್ಯ ಕೆಲಸವನ್ನು ಮಾಡುತ್ತ ಪ್ರಜೆಗಳ ಮತ್ತು ಅರಸನ ಪ್ರೀತಿ ಪಾತ್ರರಾದರು. ರಾಜನಿಂದ "ತೆನ್ನವನ್ ಪಿರಮರಾಯನ್" ಎಂಬ ಬಿರುದನ್ನೂ ಶಿಬಿಕೆ, ಛತ್ರಿ, ಚಾಮರಾದಿ ಮರ್ಯಾದೆಗಳನ್ನೂ ವಿಶೇಷ ಐಶ್ವರ್ಯವನ್ನೂ ಪಡೆದರು. ಇಷ್ಟಾದರೂ ಮನಸ್ಸು ಮಾತ್ರ, ತಾವರೆ ಎಲೆಯ ಮೇಲಿನ ನೀರಿನಂತೆ ಸಂಸಾರದಲ್ಲಿ ಸ್ವಲ್ಪವೂ ಅಂಟಿಕೊಳ್ಳದೆ ಇವುದರ ಜೊತೆಗೆ ಶಿವಜ್ಞಾನವನ್ನೀವ ಉತ್ತಮ ಗುರು ಎಂದು ಲಭಿಸುವರೋ ಎಂದು ಚಿಂತಿಸುತ್ತ ಅದಕ್ಕಾಗಿ ಈಶ್ವರನನ್ನು ಬೇಡುತ್ತಲೇ ಇದ್ದಿತು.

ಹೊರಡುವ ಮುನ್ನ "ಈಗಲಾದರೂ ಈಶ್ವರ ಕೃಪೆಯು ನನ್ನ ಮೇಲೆ ಬೀಳುವುವೇ" ಎಂದು ಮನದಲ್ಲಿ ನೆನೆದುಕೊಂಡು ಮತ್ತೊಮ್ಮೆ ವಿಶೇಷವಾಗಿ ಆ ಬಗ್ಗೆ ಪ್ರಾರ್ಥಿಸಿಕೊಂಡರು. ಈ ಶನಿಗೂ ಕರುಣೆಯು ಹುಟ್ಟಿತು.

ಹೀಗಿರಲಾಗಿ, ರಾಜನಿಗೆ ಪೂರ್ವ ತೀರದಲ್ಲಿ ಉತ್ತಮ ವರ್ಗದ ಕುದುರೆಗಳು ಬಂದಿಳಿದಿವೆ ಎಂದು ತಿಳಿಯಬಂದಿತು. ಅಮಾತ್ಯರಲ್ಲಿ ದ್ರವ್ಯನಿತ್ತು ಕುದುರೆಗಳನ್ನು ಕೊಂಡು ತರಬೇಕೆಂದು ರಾಜನು ಕೇಳಿಕೊಂಡನು. ವಾದವೂರರು ಇತರ ಕೆಲವು ಉದ್ಯೋಗಸ್ಥರೊಡಗೂಡಿ ಹೊರಟರು. ಹೊರಟವರು ತಿರುಪ್ಪೆರುನ್ತು × ಕೈ" ಎಂಬ ಸ್ಥಳವನ್ನು ಸೇರಿದರು. ಅಲ್ಲೊಂದು ನಂದನವನದಿಂದ ಹರನಾಮವು ಮೊಳಗುತ್ತಿದ್ದುದು ಕೇಳಬಂದಿತು. ಆದರಿಂದ ಸೆಳೆಯಲ್ಪಟ್ಟ ವಾದವೂರರು ಅಲ್ಲಿಗೆ ಹೋದರು. ಭಕ್ತನನ್ನು ಜ್ಞಾನಿಯಾಗಿ ಮಾಡಲು ಇತರರನ್ನು ತೋರಿಸದೆ ತಾನೇ–ಪರಮ ಗುರುವಾದವನು–ಗುರುವಾಗಿ ಜ್ಞಾನೋಪದೇಶ ಮಾಡಲು ತೀರ್ಮಾನಿಸಿದ ಈಶ್ವರನು ಅಲ್ಲಿ ಒಂದು ಅರ್ಜುನ ವೃಕ್ಷದಡಿಯಲ್ಲಿ ಶಿವಯೋಗಿಯಾಗಿ ಶಿವಗಣಗಳನ್ನು ಶಿಷ್ಯರಾಗಿಟ್ಟುಕೊಂಡು ಉಪದೇಶ ಮಾಡುತ್ತ ಕುಳಿತಿದ್ದುದನ್ನು ಕಂಡರು. ಒಡನೆಯೇ ಅಯಸ್ಕಾಂತ ಶಿಲೆಯಿಂದ ಆಕರ್ಷಿಸಲ್ಪಡುವ ಸೂಜಿಯೋಪಾದಿಯಲ್ಲಿ ಪರವಶರಾಗಿ ಓಡಿ ಅವರಡಿಗೆರಗಿ ತಮ್ಮನ್ನುದ್ಧಾರ ಮಾಡಬೇಕೆಂದು ಬೇಡಿಕೊಂಡರು. ಅದಕ್ಕಾಗಿಯೇ ಇಳಿದಿದ್ದ ಪರಮೇಶ್ವರನು ತನ್ನ ದಿವ್ಯ ದೃಷ್ಟಿ, ಸ್ಪರ್ಶ ಮತ್ತು ಅಮೃತವಾಕ್ಕುಗಳಿಂದ ಜ್ಞಾನ ದೀಕ್ಷೆಯನ್ನು ಅನುಗ್ರಹಿಸಿದನು. ಪರಮ ಕೃಪಾ ಪರಿಪೂರ್ಣನಲ್ಲವೆ!

ಸಾಕ್ಷಾತ್ ಪರಮೇಶ್ವರನಿಂದಲೇ ನೇರವಾಗಿ ಜ್ಞಾನ ದೀಕ್ಷೆಯನ್ನು ಪಡೆದ ಸ್ವಾಮಿಗಳು ಗುರುವನ್ನು ಕುರಿತು ಸ್ತೋತ್ರ ಮಾಡಿ ಹಾಡಿದರು. ಕೇಳಿದ ಪರಮ ಗುರುಗಳು ಇವರ ವಾಕ್ಕಿನಿಂದ ಹೊರಟ ಮಾತುಗಳು ಅಮೂಲ್ಯವಾಗಿದ್ದುದನ್ನು ಕಂಡು ಆನಂದ ಭರಿತರಾಗಿ ಶಿಷ್ಯರಿಗೆ ಮಾಣಿಕ್ಯ–ವಾಚಕರೆಂಬ ದೀಕ್ಷಾನಾಮವನ್ನನುಗ್ರಹಿಸಿದನು. ಆಗ ತಮ್ಮ ತನು, ಮನ, ಧನಗಳೆಲ್ಲವೂ ಗುರುವಿನ ಒಡವೆಗಳೆಂದು ಎಣಿಸಿ ಅವುಗಳನ್ನು–ರಾಜನಿತ್ತಿದ್ದ ಕುದುರೆಗಳಿಗಾಗಿ ತಂದಿದ್ದ ಹಣ ಸಹಿತ–ಗುರುವಿಗೆ ಅರ್ಪಿಸಿ ನಿಂತರು. ದೇವನು ಅವುಗಳನ್ನು ಅಂಗೀಕರಿಸಿರುವುದಾಗಿ ತಿಳಿಸಿ, ಹಣವನ್ನು ಆ ಕ್ಷೇತ್ರದಲ್ಲಿ ಶಿವಾಲಯ ನಿರ್ಮಾಣಕ್ಕೂ, ಸಾಧು ಸಜ್ಜನರಿಗೂ ಉಪಯೋಗಿಸುವಂತೆ ಅಪ್ಪಣೆ ಮಾಡಿದನು. ಗುರ್ವಾಜ್ಞೆಯನ್ನು ಶಿರಸಾವಹಿಸಿ ಸ್ವಾಮಿಗಳು ಆಲಯ ನಿರ್ಮಾಣ ನಿರತರಾದರು.

ಸ್ವಾಮಿಗಳ ಜೊತೆಯಲ್ಲಿ ಬಂದಿದ್ದವರು ದೊರೆಯಲ್ಲಿ ದೂರು ಹೇಳಲು ಹೊರಟರು. ರಾಜನು ಕೆಲವರನ್ನು ಕಳುಹಿಸಿ ವಿಚಾರ ತಿಳಿದು ಬರುವಂತೆ ಆಜ್ಞಾಪಿಸಿದನು. ಅವರು ಸ್ವಾಮಿಗಳನ್ನು ಕಂಡು, "ರಾಜನು ಕುದುರೆಗಳು ಬರುವುವೆಂದು ಕಾದಿರುವನು. ತಾವು ಆ ಬಗ್ಗೆ ಯಾವ ಪ್ರಯತ್ನವನ್ನೂ ಮಾಡದೆ ಇಲ್ಲಿ ನೆಲಸಿ ರಾಜ ಸ್ವತ್ತನ್ನು ದುರುಪಯೋಗ ಮಾಡುತ್ತಿರುವುದಾಗಿ ದೂರು ಬಂದ ಕಾರಣ ನಾವು ಇಲ್ಲಿಗೆ ರಾಜಾಜ್ಞೆಯಿಂದ ಬಂದಿರುವೆವು ರಾಜನಲ್ಲಿ ಏನು ತಿಳಿಸಬೇಕು?" ಎಂದು ಅಂದರು. "ರಾಜನ ಸ್ವತ್ತು ದುರುಪಯೋಗವಾಗುತ್ತಿದೆಯೆ?" ಎಂದು ಯೋಚಿಸಿದ ಸ್ವಾಮಿಗಳು, "ನೀವು ರಾಜರಲ್ಲಿ ಹೀಗೆಂದು ತಿಳಿಸಿ: ಕುದುರೆಗಳು ಬರುತ್ತವೆ" ಎಂದುತ್ತರವಿತ್ತರು. ಬಂದವರು ಹಿಂದಿ

ರುಗಿ ರಾಜನಲ್ಲಿ ವಿಚಾರ ತಿಳಿಸಿದರು. ಕೆಲಕಾಲ ಅಮಾತ್ಯರ ಆಗಮನವನ್ನು ನಿರೀಕ್ಷಿಸುತ್ತಿದ್ದ ರಾಜ, ಗೂಢಚಾರರ ಮೂಲಕ ತಿರುಪ್ಪೆರುನ್ದುರೈಯಲ್ಲಿನ ವಿದ್ಯಮಾನಗಳನ್ನು ತಿಳಿದುಕೊಂಡವನಾಗಿ ಕೆಲವು ಭಟರನ್ನು ಅಮಾತ್ಯನನ್ನು ಕರೆತರಲು ಕಳುಹಿಸಿಕೊಟ್ಟನು. ಅವರು ಬರದ ಪಕ್ಷಕ್ಕೆ ಅವನನ್ನು ಬಂಧಿಸಿ ತರುವಂತೆ ಆಜ್ಞಾಪಿಸಿದನು.

ಭಟರು ಸ್ವಾಮಿಗಳಲ್ಲಿ ರಾಜಾಜ್ಞೆಯನ್ನು ಬಿನ್ನವಿಸಿಕೊಂಡರು. ಆ ಹೊತ್ತಿಗೆ ಆಲಯ ನಿರ್ಮಾಣ ಕಾರ್ಯವು ಮುಗಿದಿದ್ದಿತು. ರಾಜಾಜ್ಞೆಯನ್ನು ಕೇಳಿದವರು ಜ್ಞಾನಲೋಕದಿಂದ ವ್ಯವಹಾರ ಪ್ರಪಂಚಕ್ಕೆ ಇಳಿದರು. ದೇವರ ಮುಂದೆ ನಿಂತು ಪ್ರಾರ್ಥಿಸಿದರು. ಅಶರೀರ ವಾಣಿಯೊಂದು, ''ಕುದುರೆಗಳು ಬರುವುವೆಂದು ರಾಜನಲ್ಲಿಗೆ ಹೋಗಿ ತಿಳಿಸು" ಎಂದು ಕೇಳಿಸಲು ರಾಜಭಟರೊಂದಿಗೆ ಹಿಂದಿರುಗಿ ರಾಜನಲ್ಲಿ ''ಕುದುರೆಗಳು ಬರುವುವು" ಎಂದರು. ರಾಜನು ಕೆಲವು ದಿನಸಗಳು ಸುಮ್ಮನಿದ್ದವನು, ''ಕುದುರೆಗಳು ಬರಲಿಲ್ಲವಲ್ಲ, ಯಾವಾಗ ಬರುವುವು?" ಎಂದು ಸ್ವಾಮಿಗಳನ್ನು ಪ್ರಶ್ನಿಸಿದನು. ಅವರಿಗೆ ಉತ್ತರ ಹೇಳಲು ಬಾಯಿಬರಲಿಲ್ಲ. ಕೋಪಗೊಂಡ ರಾಜನು ಅವರನ್ನು ಬಂಧಿಸಿದನು. ಅವರನ್ನು ಹಿಂಸಿಸಲಾರಂಭಿಸಿದನು ಅವರು ದೇವರನ್ನು ಕುರಿತು, ''ಒಳ್ಳೆಯದು ಮಾಡುವೆಯೋ ಕೇಡಕನ್ನೇ ತಂದೊಡ್ಡುವೆಯೋ, ಯಾವುದನ್ನಾದರೂ ಮಾಡು. ನನಗೆ ಅದರಲ್ಲೇನಿದೆ" ಎಂದು ಸ್ತುತಿಸುತ್ತ ದೃಢಚಿತ್ತರಾಗಿದ್ದರು.

ಸಿಂಹಮಾಸ ಮೂಲಾನಕ್ಷತ್ರದಿನ. ಈಶ್ವರನು ವ್ಯಾಪಾರಿ ವೇಷಧರಿಸಿ ಅರಣ್ಯದ ನರಿಗಳನ್ನೆಲ್ಲ ಅಶ್ವಗಳಾಗಿ ಪರಿವರ್ತಿಸಿ ಮಧುರೆ ಹೊಕ್ಕನು. ರಾಜನಲ್ಲಿ ''ಕುದುರೆಗಳು ಅಮಾತ್ಯರು ಕೊಂಡವುಗಳು ಬಂದಿವೆ" ಎಂದನು ಅವುಗಳ ಪರೀಕ್ಷೆ ನಡೆಯಿತು. ಪ್ರತಿಯೊಂದೂ ಉತ್ತಮ ಲಕ್ಷಣಗೊಂಡುದಾಗಿಯೂ ಓಟ, ದುಡಿಮೆ ಮುಂತಾದುವುಗಳಲ್ಲಿ ಅದ್ವಿತೀಯವಾದುದಾಗಿಯೂ ಕಂಡುಬಂದಿತು. ರಾಜನು ಸಂತೋಷಭರಿತನಾದನು. ಸ್ವಾಮಿಗಳನ್ನು ಬಿಡಿಸಿ ಕ್ಷಮೆ ಬೇಡಿದನು.

ನಿರ್ಲಿಪ್ತರಾದ ಅವರು ''ಕ್ಷಮಿಸುವುದಕ್ಕೆ ನಾನಾರು? ನೀವುಮಾಡಿದ ಅಪರಾಧತಾನೆ ಏನು? ಅವಶ್ಯಮನು ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ! ನನಗೆ ನನಗೆ ಯಾವ ತೊಂದರೆಯೂ ಆಗಿಲ್ಲ" ಎಂದರು. ಕುದುರೆಗಳು ಲಾಯ ಸೇರಿಸಲ್ಪಟ್ಟುವು.

ರಾತ್ರಿ ಅಶ್ವಗಳು ತಮ್ಮ ಪೂರ್ವರೂಪ ಪಡೆದು ಇದ್ದ ನಿಜ ಅಶ್ವಗಳನ್ನೂ ಕಚ್ಚಿ ಪಲಾಯನ ಮಾಡಿದುವು. ಇದನ್ನು ತಿಳಿದ ರಾಜ ಕಿಡಿಕಿಡಿಯಾದ. ಅಮಾತ್ಯರನ್ನು ಸೆರೆಯಲ್ಲಿಡಲು ಆಜ್ಞಾಪಿಸಿದ ಮಧ್ಯಾಹ್ನದ ಕಡು ಬಿಸಿಲಿನಲ್ಲಿ ವೈಗೈ ನದಿಯ ಮರಳಿನ ಮೇಲೆ ನಿಲ್ಲಿಸುವಂತೆ ವಿಧಿಸಿದ.

ಬಿಸಿಲೇರುತ್ತಿತ್ತು. ಭಟರು ಸ್ವಾಮಿಗಳನ್ನು ನದಿಯ ದಡದಲ್ಲಿ ತೇವವಿಲ್ಲದ ಕಡೆ ಕಾದುಬರುತ್ತಿದ್ದ ಮರಳಿನ ಮೇಲೆ ನಿಲ್ಲಿಸಿದರು. ದೇಹವನ್ನು ಮರೆತು ಧ್ಯಾನ ಮಗ್ನರಾಗಿ ಅವರು ನಿಂತಿದ್ದರು. ಭಕ್ತನನ್ನು ರಕ್ಷಿಸುವ ಪರಮನು ಹಠಾತ್ತನೆ ವೈಗೈಯಲ್ಲಿ ದೊಡ್ಡ ಪ್ರವಾಹವನ್ನುಂಟುಮಾಡಿದನು. ನೀರು ನಗರದೊಳಗೆ ನುಗ್ಗಿ ಬರಲಾರಂಭಿಸಿತು ಒಡನೆಯೇ ರಾಜಾಜ್ಞೆಯು ಹೊರಟಿತು. ಸ್ವಾಮಿಯನ್ನು ಸೆರೆಮನೆಯಲ್ಲಿಡಲಾಯಿತು. ಮನೆಗೊಂದಾಳಂತೆ ಕೂಡಲೇ ನದಿಗೆ ದಂಡೆ ಕಟ್ಟಿ ಊರನ್ನು ಕಾಪಾಡಲು ಎಲ್ಲ ಉದ್ಯುಕ್ತರಾದರು. ಕೆಲಸ ಬಿರುಸಾಗಿ ಸಾಗುತ್ತಿದ್ದಿತು. ಒಂದು ಕಡೆಯಿಂದ ಅವರನರಿಗೆ ವಿಭಾಗವಾದ ಸ್ಥಳ ಮರಳು, ಮಣ್ಣಿನಿಂದ ಎತ್ತರವಾಗುತ್ತ ಬಂದಿತು.

ಮಧುರೆಯಲ್ಲಿ ಓರ್ವ ವೃದ್ಧೆ. 'ಪಿಟ್ಟು' ಎಂಬ ತಿಂಡಿಯನ್ನು ತಯಾರಿಸಿ ಮಾರಿ ಜೀವನ ಸಾಗಿಸುತ್ತಿದ್ದಳವಳು. ಉತ್ತಮಿಯೂ ಭಕ್ತೆಯೂ ಆಗಿದ್ದ ಅವಳು ಮಾಡಿದ ತಿಂಡಿಯನ್ನು ಮೊದಲು ಈಶ್ವರನಿಗೆ ನಿವೇದನ ಮಾಡಿ ಅನಂತರ ಮಾರುವ ಪದ್ಧತಿಯನ್ನಿಟ್ಟಿದ್ದಳು. ಆದರಿಂದಲೇ ತಿಂಡಿಯು ರುಚಿಯಾಗಿ ಆಕೆಯ ಜೀವನ ಹೆಚ್ಚು ಶ್ರಮವಿಲ್ಲದೆ ಸಾಗಲು ಕಾರಣವಾಯಿತು. ಆಕೆಗೆ ಬೇರೆ ಸಮೀಪ-ಬಂಧುಗಳಿರಲಿಲ್ಲ. ಕೂಲಿಗೆ ಆಳು ದೊರಕಲಿಲ್ಲ. ತಾನು ಕೆಲಸಮಾಡುವ ಶಕ್ತಿಯನ್ನು ಪಡೆದಿರಲಿಲ್ಲ. ''ಸ್ವಾಮಿ! ನಾನೇನು ಮಾಡಲಿ.

ಕೆಲಸಗಾರರಾರೂ ದೊರಕಲಿಲ್ಲವಲ್ಲ. ನನ್ನ ಪಾಲಿಗೆ ಬಿದ್ದ ಕೆಲಸವನ್ನು ಮಾಡದಿದ್ದಲ್ಲಿ ಶಿಕ್ಷೆಗೆ ಗುರಿಯಾಗಬೇಕಲ್ಲ. ಏನು ಮಾಡಲಿ ಆಪತ್ಬಂಧುವಾದ ನೀನು ಕಾಪಾಡಬೇಕು. -ಇನ್ನಾರೂ ನನಗೆ ನೆರವಾಗುವವರಿಲ್ಲ" ಎಂದು ಮೊರೆಯಿಟ್ಟಳು.

ಏನಾಗುವುದೋ ಎಂದು ಭಯಾಕ್ರಾಂತಳಾಗಿ ಕುಳಿತಿದ್ದ ವೃದ್ಧೆಯ ಮುಂದೆ ಒಬ್ಬ ಕೂಲಿಯಾಳು ನಿಂತ. ಚೊಕ್ಕನಾಥ-ಸೋಮಸುಂದರ ಭಕ್ತೆಯ ಕಷ್ಟವನ್ನು ಪರಿಹರಿಸಲೋಸುಗ ಆ ವೇಷದಲ್ಲಿ ಬಂದಿದ್ದ. ದಿನ ನೈವೇದ್ಯ ಮಾಡುತ್ತಿದ್ದ. ಭಕ್ತಿಪೂರ್ವಕ ತಯಾರಾಗುತ್ತಿದ್ದ ತಿಂಡಿಯನ್ನು ನೇರವಾಗಿ ರುಚಿನೋಡಬೇಕೆಂದೆನಿಸಿರಬೇಕು ಪರಮನಿಗೆ. ''ಅಜ್ಜೀ ಆಳು ಬೇಕೆ?"ಎಂದ. ಬೇಕಪ್ಪ. ''ನನ್ನನ್ನುಳಿಸು ಒಡೆಯ. ನನ್ನ ಪಾಲಿನ ಸ್ಥಳಕ್ಕೆ ಮರಳು, ಮಣ್ಣು ಹಾಕಿ ನೀರನ್ನು ತಡೆಗಟ್ಟಬೇಕು. ಕೂಲಿ ಏನು ಕೇಳುವೆ?" ಎಂದು ಕೇಳಿದಳು. ಸ್ವಾಮಿಯು, ''ಅಜ್ಜಿ, ಕೂಲಿ ಏನೂ ಕೊಡಬೇಕಾಗಿಲ್ಲ. ನೀನು ತಯಾರಿಸುವ ತಿಂಡಿಯು ಪೂರ್ಣವಾಗಿ ನಿಲ್ಲದೆ ಒಡೆದುಹೋದುವನ್ನು ಮಾತ್ರ ಕೊಡುವುದಾದರೆ, ಕೆಲಸಮಾಡುತ್ತೇನೆ" ಎಂದ. ವೃದ್ಧೆಯು, "ಆಗಲಿ. ಕೊಡುತ್ತೇನೆ ಆದರೆ ಈವರೆಗೆ ನಾನು ತಯಾರಿಸಿ ಒಡೆದುದು ಎಂಬ ಪ್ರಸಕ್ತಿಯೇ ಇಲ್ಲ. ಆ ಕಾರಣ ನಿನಗೆ ಏನೂ ಸಿಗುವಂತಿಲ್ಲ. ಕೂಲಿಮಾಡಿಸಿಕೊಂಡು ಸುಮ್ಮನೆ ನಿನ್ನನ್ನು ಕಳಿಸುವುದಿಲ್ಲ. ಭಕ್ಷ್ಯದಲ್ಲಿ ಕೆಲವನ್ನು ಕೂಲಿಗೆ ಸರಿಹೋಗುವಂತೆ ಕೊಡುತ್ತೇನೆ. ಮಾನಕಾಪಾಡಲು ಬಂದವನಿಗೆ ಇನ್ನೂ ಹೆಚ್ಚಾಗಿ ಕೊಡುತ್ತೇನೆ" ಎಂದಳು.

ಸ್ವಾಮಿ: ಅಜ್ಜೀ! ನಾನು ಕೂಲಿಗಾಗಿ ಬಂದವನಲ್ಲ. ನೀನು ರುಚಿಯಾಗಿ ತಯಾರಿಸುವ ತಿಂಡಿಯನ್ನು ರುಚಿನೋಡಬೇಕೆಂಬ ಆಸೆ ನನಗೆ. ನೀನು ಇದರಿಂದ ಜೀವನ ನಡೆಸುವವಳು. ಆದಕಾರಣ ಯಾರೂ ಕೊಳ್ಳದೆ ಹೋಗುವ, ಒಡೆದು ಪುಡಿಯಾಗುವುದನ್ನು ಮಾತ್ರ ಕೊಟ್ಟರೆ ಸಾಕು. ಇದಕ್ಕೊಪ್ಪುವುದಾದರೆ ಕೆಲಸಮಾಡುತ್ತೇನೆ. ಬೇರೆ, ಪೂರ್ತಿಯಾದುದನ್ನು ಕೊಡಬಾರದು, ಒಪ್ಪದಿದ್ದಲ್ಲಿ, ಇಗೋ ಹೊರಟೆ.

ವೃದ್ಧೆ: ಬೇಡಪ್ಪ ಸ್ವಾಮಿ, ನನ್ನ ಕಾಯಲು ಬಂದ ದೊರೆ. ನಿನ್ನಿಷ್ಟ. ಸುಮ್ಮನೆ ಕೆಲಸಮಾಡಿಸಿಕೊಳ್ಳಲು ಇಷ್ಟವಿಲ್ಲ; ಹಾಗೆಂದೆ. ನಿನ್ನಿಷ್ಟದಂತೆ ಮಾಡುತ್ತೇನೆ. ನನ್ನನ್ನು ಶಿಕ್ಷೆಗೊಳಗಾಗದೆ ತಪ್ಪಿಸು.

"ಕೆಲಸಮುಗಿಯಲಿ ಅತ್ತ, ಕರೆದು ತಿಂಡಿಯನ್ನು ಕೊಟ್ಟು ಕಳುಹಿಸುತ್ತೇನೆ" ಎಂದುಕೊಂಡು ಆಕೆ ತನ್ನ ಕೆಲಸಕ್ಕಿಳಿದಳು. ಸ್ವಲ್ಪ ''ಅಡಿಕೆಲೆ ಅಜ್ಜಿ" ಎನ್ನುತ್ತ ಕುಳಿತ ಆಳಾಗಿ ಬಂದ ಸುಂದರೇಶ್ವರ. ಸ್ವಲ್ಪಹೊತ್ತಿಗೆ ತಿಂಡಿಯನ್ನು ಇಳಿಸಿದಳು. ಏನು ಆಶ್ಚರ್ಯ! ಪುಡಿಪುಡಿಯಾಗಿದೆ. ವೃದ್ಧೆಯು ಸಂತೋಷದಿಂದ ಅದನ್ನು ಆಳಿಗೆ ಕೊಟ್ಟಳು. ಆತ ಅದನ್ನು ತಿನ್ನುತ್ತ ಇನ್ನಿತರ ಕೆಲಸಗಾರರಿಗೂ ಕೊಂಚ ಕೊಟ್ಟನು. ಅನಂತರ ಸ್ವಲ್ಪ ಮರಳನ್ನು ಕುಕ್ಕೆಯಲ್ಲಿ ತೆಗೆದುಕೊಂಡು ಮೆಲ್ಲನೆ ನಡೆದು ದೂರ ಅದನ್ನು ಚೆಲ್ಲುವ ಪ್ರಯತ್ನ ಮಾಡಿದ. ಕುಕ್ಕೆಯನ್ನೇ ಪ್ರವಾಹದಲ್ಲಿ ಕುಕ್ಕಿದ. ಕೂಡಲೇ ನೀರಿಗೆ ಬಿದ್ದು ಕುಕ್ಕೆಯನ್ನು ತಂದ. ಅವನ ಒಯ್ಯಾರ ನಡಿಗೆ ಹಾಸ್ಯಭರಿತ ಮಾತು; ಕೆಲಸಮಾಡುವ ವಿಚಿತ್ರ ರೀತಿ ಇವು ಇತರ ಕೆಲಸಗಾರರನ್ನು ಆಕಡೆ ಸೆಳೆದುವು. ಎಲ್ಲರೂ ಪಕ್ಕೆಗಳು ನೋಯುವಷ್ಟು ನಗುತ್ತ ತಮ್ಮ ತಮ್ಮ ಕೆಲಸವನ್ನೂ ಅಷ್ಟು ಸಮರ್ಪಕವಾಗಿ ಮಾಡಲಿಲ್ಲ.

ವೃದ್ಧೆಯು ತಯಾರಿಸಿದ ಪ್ರತಿಯೊಂದು ಭಕ್ಷ್ಯವೂ ಅಂದು ಉದುರಿಹೋಯಿತು. ''ಸ್ವಾಮಿ! ನಿನ್ನ ಲೀಲೆ ತಿನ್ನಲಿ ಈತ" ಎಂದು ಸಂತೋಷಚಿತ್ತಳಾಗಿ ತಯಾರಾದಂತೆಲ್ಲ ಆತನನ್ನು ಕರೆದು ಬಿಸಿಬಿಸಿಯಾಗಿ ಆತನ ಕೈಲಿಟ್ಟಳು. ಅಂತೂ, ಇಂತೂ ಮಾಡಬೇಕಾದ ಕೆಲಸ ಹಿತಕರವಾಗಿ ಸಾಗಲಿಲ್ಲ.

ಸಾಯಂಕಾಲವಾಗುತ್ತಬಂದಿತು, ರಾಜನ ಅಪ್ಪಣೆಯಂತೆ ಅಧಿಕಾರಿಗಳು ದಂಡೆಯನ್ನು ವೀಕ್ಷಿಸುತ್ತ ಬಂದರು. ಚಿಕ್ಕಗುಡ್ಡದಂತೆ ದಂಡೆಯೆದ್ದಿದೆ. ಒಂದು ಕಡೆ ಮಾತ್ರ ನೀರು ನುಗ್ಗುತ್ತಿರುವುದು ಕಂಡುಬಂದಿತು. ಅದು ಹಿಂದಿನ, ಮುಂದಿನ ಸ್ಥಳಗಳ ಮಣ್ಣನ್ನೂ ಸ್ವಲ್ಪ ಸ್ವಲ್ಪವಾಗಿ ಕರಗಿಸುತ್ತ ಹರಡುತ್ತಿದ್ದಿತು. "ಇದು ಯಾರಪಾಲು?" ಎಂದರು. "ವಂದಿಯ ಪಾಲು" ಎಂದುತ್ತರ ಬಂದಿತು. ''ಎಲ್ಲಿ ಆಕೆ? ಇದೇಕೆ ಹೀಗೆ ಬಿಟ್ಟ

ದ್ದಾಳೆ?" ಎನ್ನುತ್ತ ಅವಳಲ್ಲಿಗೆ ಬಂದು ವಿಚಾರಿಸಿದರು. ಆಕೆ ತಾನು ನಿಯಮಿಸಿದ್ದ ಆಳಿನ ಕಡೆ ಕೈತೋರಿಸಿ ದಳು. ''ಕೂಲಿಗಾರನಲ್ಲ, ಎಷ್ಟು ಮುದ್ದಾಗಿದ್ದಾನೆ ನೋಡಿ. ಆದರೂ ನನಗೆ ಸಹಾಯಮಾಡಲು ಬಂದ. ಸ್ವಲ್ಪ ಹೆಚ್ಚುಕಡಿಮೆ ಇರಬಹುದು, ಪೂರ್ತಿಮಾಡಿಬಿಡು ತ್ತಾನೆ, ಎಂದಳು. ಅಧಿಕಾರಿಗಳಿಗೆ ರೇಗಿತು. ಕೂಲಿ ಯವನನ್ನು ಹೊಡೆದು ಗದರಿಸಲೆಣಿಸಿ ಹತ್ತಿರ ಹೋದರು. ಆತನ ಮುಖವನ್ನು ನೋಡುತ್ತಲೆ ಕೈ ಬಾಯಿ ಎರಡೂ ಕೆಲಸ ಮಾಡದೆ ಹೋದವು ಬೆರಗಾಗಿ ನಿಂತುಬಿಟ್ಟರು.

ಕೊಂಚ ಹೊತ್ತಾಯಿತು. ಕರ್ತವ್ಯ ದೃಷ್ಟಿಯಿಂದ ರಾಜನಲ್ಲಿಗೆ ಒಬ್ಬನನ್ನು ಕಳುಹಿಸಿದರು. "ಎಲ್ಲ ಚೆನ್ನಾಗಿ ಕೆಲಸಮಾಡಿ ಮುಗಿಸಿದ್ದಾರೆ ಮಹಾಸ್ವಾಮಿ. ಒಂದು ಕಡೆ ಮಾತ್ರ ಪ್ರವಾಹ ಒಳನುಗ್ಗುತ್ತಿದೆ. ಅಲ್ಲಿಗೆ ನಿಯ ಮಿಸಲ್ಪಟ್ಟಿರುವ ಕೂಲಿಗಾರನ ವರ್ತನೆಯು ವಿಚಿತ್ರವಾ ಗಿದೆ. ಆತ ಕೆಲಸ ಮಾಡಿದ ಹಾಗೆ ಕಾಣುವುದಿಲ್ಲ. ಆತನನ್ನು ಗದರಿಸಿಕೊಳ್ಳಲು ಅಧಿಕಾರಿಗಳಿಗೆ ಆದೇಕೋ ಮನಸ್ಸೇ ಬರುವುದಿಲ್ಲ. ಇರುವ ವಿಷಯ ಅರಿಕೆಮಾಡಿ ಕೊಂಡಿದ್ದೇನೆ ಮುಂದೇನು ಮಾಡಬೇಕು? ಅಪ್ಪಣೆ ಯಾಗಬೇಕು" ಎಂದು ಆತ ರಾಜನಲ್ಲಿ ತಿಳಿಸಿದ

ರಾಜನಿಗೆ ಆಶ್ಚರ್ಯವಾಯಿತು. ಆಳಿನ ವಿಚಿತ್ರ ವರ್ತನೆಯ ವಿವರವನ್ನು ಕೇಳಿ ತಿಳಿದ. ಕುತೂಹಲ ಹೆಚ್ಚಿ ಮಂತ್ರಿ ಪ್ರಧಾನಿಗಳೊಡಗೂಡಿ ಅಲ್ಲಿಗೆ ಬಂದ

ಆಳು ಭಕ್ಷ್ಯ ತಿನ್ನುತ್ತ ಕೆಲಸ ಮಾಡುವ ನಟನೆ ಯನ್ನು ಮಾಡುತ್ತಿದ್ದ. ರಾಜನಿಗೆ ರೇಗಿತು. ಕೈಲಿದ್ದ ಬೆಳ್ಳಿಯ ಬೆತ್ತದಿಂದ ಅವನ ಬೆನ್ನಿನ ಮೇಲೆ ಒಂದು ಏಟನ್ನು ಕೊಟ್ಟ. ಆ ಏಟು ಪ್ರಪಂಚದ ಸಕಲ ಚರಾ ಚರ ವಸ್ತುಗಳ ಮೇಲೂ ತಗುಲಿತು. ರಾಜನ ಬೆನ್ನಿನ ಮೇಲೂ ಬಿದ್ದಿತು. ಕೂಡಲೇ ಸ್ವಲ್ಪ ಮಣ್ಣನ್ನು ಅಲ್ಲಿ ಹಾಕಿ ಸ್ವಾಮಿಯು ಅಂತರ್ಧಾನನಾದ. ದಂಡೆಯೆದ್ದು ನೀರು ತಡೆಯಲ್ಪಟ್ಟಿತು!

ರಾಜನು ಎಚ್ಚೆತ್ತ "ನಮ್ಮ ಸ್ವಾಮಿಯ ಲೀಲೆ ಇದು. ಭಕ್ತರನ್ನು ಶಿಕ್ಷಿಸ ತೊಡಗಿದ ನನ್ನನ್ನು ಈ ಮೂಲಕ ಹೆಚ್ಚು ಪಾಪಕ್ಕೀಡಾಗದಂತೆ ರಕ್ಷಿಸಿದ''ಎಂದು ಕೊಂಡು ಸ್ವಾಮಿಗಳನ್ನು ಮರ್ಯಾದೆಯಿಂದ ಕರೆತರಬೇ ಕೆಂದಪ್ಪಣೆಯಿತ್ತು ಅರಮನೆ ಸೇರಿದ. ಅಲ್ಲಿ ಸ್ವಾಮಿ ಗಳ ಅಡಿಗೆರಗಿ ತನ್ನನ್ನು ಕ್ಷಮಿಸಬೇಕೆಂದು ಬೇಡಿ ಅವ ರನ್ನು ಅವರಿಷ್ಟವೇನೆಂದು ಕೇಳಿದ. ಮಂತ್ರಿಪದವಿ

ಯಿಂದ ಬಿಡುಗಡೆ ಮಾಡಬೇಕೆಂದು ಅವರು ಕೇಳ ಹಾಗೆ ಮಾಡಿರುವುದಾಗಿ ತಿಳಿಸಿ, ತವರಪ್ಪಣೆಯನ್ನ ಏನಿದ್ದರೂ ಮಾಡಲು ಅಡಿಯಾಳಾಗಿ ಕಾದಿರುವು ಗಿಯೂ ರಾಜನು ತಿಳಿಸಿದ. ಅನಂತರ ಈಶ್ವರನನ ದೇವಸ್ಥಾನದಲ್ಲಿ ದರ್ಶಿಸಿ ತನ್ನ ಅಪರಾಧಗಳನ್ನು ಕ್ಷಮಿ ಸುವಂತೆ ಪ್ರಾರ್ಥಿಸಿಕೊಂಡು ಅರಮನೆಗೆ ಹಿಂತಿರುಗಿದ

ರಾಜನಲ್ಲಿ ತಮಗೆ ಬೇಕಾದುದು ಬಿಡುಗಡೆ ಹೊರ ಯಾವುದೂ ಇಲ್ಲವೆಂದು ತಿಳಿಸಿ ಸ್ವಾಮಿಗಳು ಅಲ್ಲಿಂ ಹೊರಟು "ತಿರುಪ್ಪೆರುನ್ದುರೈ'' ಸೇರಿದರು. ಮ ಅವರಿಗೆ ಅಲ್ಲಿ ಹಿಂದಿನ ಈಶನ ದರ್ಶನವಾಯಿತ ಆನಂದಭರಿತರಾದರು. ಪರಮಗುರುವಾದ ಈಶ್ವರನ ದಿವ್ಯಸ್ಥಳಗಳಿಗೆ ಬಿಜಯಮಾಡಿ ಅಲ್ಲಲ್ಲಿನ ಈಶ್ವ ಮೂರ್ತಿಯನ್ನು ಸ್ತೋತ್ರಮಾಡಿ ಕೊನೆಗೆ ತನ್ನನ ಸೇರುವಂತೆ ಅಪ್ಪಣೆಕೊಟ್ಟನು.

ಸ್ವಾಮಿಗಳು ಗುರುವಿನ ಅಪ್ಪಣೆಯನ್ನು ಶಿರಸಾ ಹಿಸಿ ಅನೇಕ ದಿವ್ಯಸ್ಥಳಗಳಿಗೆ ಯಾತ್ರೆಯಾಗಿ ಹೊರಟ ಅಲ್ಲಲ್ಲಿ ದೇವಸ್ಥಾನಗಳಲ್ಲಿ ಬೆಳಗುವ ಮೂರ್ತಿಗಳನ ದರ್ಶನ ಮಾಡಿ ಸ್ತೋತ್ರ ಮಾಡಿದರು.

ಇವರ ಸ್ತೋತ್ರರೂಪವಾದ ಪದ್ಯಗಳನ್ನು "ತಿರುವ ಚಕಂ" ಎನ್ನುತ್ತಾರೆ. ಇದನ್ನು ಈಶ್ವರನೇ ಇವರ ಹೇಳಿಸಿ ತಾನು ಬರೆದಿಟ್ಟನು. ಉತ್ತಮ ಶೃಂಗಾರಪದ ಗಳನ್ನು ಹಾಡಿಸಿ ಅದನ್ನೂ ಬರೆದಿದ್ದನು. ಅದು ''ತಿರುಕ್ಕೋವೈಯಾರ್" ಎಂಬಹೆಸರಿದೆ. ಬರೆದ ತಾ ಗರಿಗಳು ಚಿತ್ಸಭೇಶನ ಸನ್ನಿಧಾನದಲ್ಲಿ ಕಂಡುಬಂದುವ ಅದನ್ನು ತೆಗೆದು ನೋಡಿದರು ದೀಕ್ಷಿತರು. ಆ ಸಮ ಯಕ್ಕೆ ಅಲ್ಲಿ ಬಂದಿದ್ದ ಸ್ವಾಮಿಗಳಲ್ಲಿ ತೋರಿಸಿ ಅರ್ಥ ವಿವರಿಸಲು ಬೇಡಿಕೊಂಡರು. ಸ್ವಾಮಿಗಳು ಮೂ ಸಾವಿರ ದೀಕ್ಷಿತರನ್ನೂ ಕರೆದುಕೊಂಡು ದೇವಾಲ ವನ್ನು ಹೊಕ್ಕು ಒಳಗೆ ತೋರಿಸುತ್ತ, ''ಇವುಗಳ ಅರ್ಥ ಇವನು" ಎಂದು ಹೇಳಿ ಈಶನಲ್ಲಿ ಐಕ್ಯರಾದರು

ತಿರುವಾಚಕದ ಸವಿಯನ್ನು ಅರಿತ ಭಕ್ತರೊಬ್ಬರು ಅದು ಹಾಡುತ್ತಿದ್ದಾಗ ಒಳ್ಳೆಯ ಕಬ್ಬಿನ ರಸದೊಂದಿ ಜೇನುತುಪ್ಪ, ಹಾಲು, ರುಚಿಯಾದ ಹಣ್ಣುಗಳ ರಸ ಸಿಹಿ, ತನ್ನದೇಹ, ಜೀವ ಎಲ್ಲ ಬೆರೆತು ಸಿಹಿ ಹೆಚ್ಚಾ ಯಿತು, ಸವಿಯುವುದಾಗುವುದಿಲ್ಲ ಎಂದು ಹೇಳುವಂ ಲ್ಲದೆ ಅನುಭವಿಸುತ್ತಲೇ ಇರಬೇಕೆಂಬಬಯಕೆಯನ್ನುಂಟ ಮಾಡುತ್ತ ಇರುವುದು ಎಂದು ಹೇಳಿರುತ್ತಾರೆ.

# ಹೆಣ್ಣಿನ ತೌರು

ಲೇಖಕಿ : ಶ್ರೀಮತಿ ಸುಲೋಚನಾ ನಾಗರಾಜ್

ತೌರು! ನಿಜ ಹೆಣ್ಣುಮಕ್ಕಳ ಪ್ರೀತಿಯ ನೆಲೆಯಾದ ಸೆಲೆಯುಕ್ಕುವ ತಾಣವೇ ತೌರು. ಅತ್ತೆಯಮನೆಯ ಸೊಸೆಯರಿಗೆ ತಮ್ಮ ತೌರಿಗೆ ಹೋಗುತ್ತೇವೆಂದರೆ ಅವರಿಗೊಂದು ದೊಡ್ಡ ಹಬ್ಬ. ತಾಯ ಮಮತೆ, ತಂದೆಯ ಮೋಹ, ಅಣ್ಣ ಅತ್ತಿಗೆಯರು, ತಂಗಿ ತಮ್ಮಂದಿರನ್ನು ಕಾಣುವ ಆತುರ, ಆರರಲ್ಲೂ ಚಿಕ್ಕಂದಿನಿಂದ ಒಡನಾಡಿ ಪಾಡಿ ನಲಿದ ಗೆಳತಿಯರನ್ನು ಕಾಣುವ ಹಂಬಲ ಇವುಗಳೆಲ್ಲದರ ನಡುವೆ ಗಂಡನನ್ನು ಗಮನಿಸಲೂ ವೇಳೆ ಸಾಲದು. ಎಂತಲೇ ನಾಲ್ಕಾರು ದಿನ ಮುಂಚೆಯೇ ಹೊಗಡುವ ಸಂಭ್ರಮವನ್ನು ನೋಡಿ ಕೆಲವರು ಕಿಡಿಗೇಡಿಗಳಾದ ಗಂಡಂದಿರು ಹಂಗಿಸುವುದುಂಟು.

"ನನಗಿಂತಾ ನಿನ್ನ ತಾಯಿತಂದೆಯರೇ ಹೆಚ್ಚಾದರಲ್ಲವೆ? ತೌರುಮನೆಗೆ ಹೊರಡಲು ಅನುಮತಿ ಸಿಕ್ಕರೆ ನಿನ್ನ ಮುಖವು ಹೇಗೆ ಅರಳುತ್ತದೆ? ಅದೇ ಪುತ್ತೆ ಗಂಡನ ಮನೆಗೆ ಬರುವಾಗ ನಿನ್ನ ಮುಖ ಅಷ್ಟೊ ಕಳಾಹೀನವಾಗಿರುತ್ತದೆ......" ಎಂದು, ಗಂಡಂದಿರಿಂದ ಬರುವ ಅಸಹನೆಯ ಮಾತಿದು

ಒಂದು ಕ್ಷಣ ಆಗ ಹೆಣ್ಣಿನ ಮನಸ್ಸಿಗೆ ತುಂಬಾ ಬೇಸರವಾಗುತ್ತದೆ. ಅಬ್ಬಾ ಇವರ ಅಸಹನೆಯೇ....? ಹೋಗೋದಿನವಾದರೂ ಸಂತೋಷವಾಗಿ ಹೋಗಿಬಾ ಎನ್ನಬಾರದೇ?........ದಿನಾ ಅಂತೂ ಇದ್ದದ್ದೇ...... .. ಇವರಂತೂ ಸದಾ ಇವರಪ್ಪ ಅಮ್ಮನನ್ನು ನೋಡುತ್ತಿರುತ್ತಾರೆ. ಆದರೆ ನಾನು? ಅಪರೂಪಕ್ಕೊಮ್ಮೆ ಎಂದು ಕಂಡೇನೋ ತೌರುಮನೇಂತ ಪಡೋ ದುಃಖ ಈ ಗಂಡಸ್ರಿಗೆ ಹೇಗೆ ಅರ್ಥವಾಗಬೇಕು? ಸಂಸಾರದಲ್ಲಿ ಈಗಾಗಲೇ ಸಾಕಷ್ಟು ಪಳಗಿ ಬೇಸತ್ತು ಇದು ಸಾಯೋವರ್ಗೂ ಇದ್ದದ್ದೇ ಎಂದು ತೀರ್ಮಾನಿಸಿ, ''ಅಂದ್ಕೊಳ್ಳಿ ನಂಗೇನಂತೆ'' ಎಂದು ತಂದುಕೊಂಡ ಸಾಂತ್ವನ.

ಇನ್ನು ತೌರುಮನೆಯಲ್ಲಿ ತಾಯಿತಂದೆಯರ ಮಮತೆಯುಂಡು, ಅಣ್ಣಅತ್ತಿಗೆಯರ ಕುಶಲ ವಿಚಾರಿಸಿ, ಯಾವನೆಲೆ, ಎಂತದೂ ಇಲ್ಲದಿದ್ದರೂ, ಯಾವುದೋ ಭವಿಷ್ಯತ್ ಕಾಲದ ನೆನಪನ್ನು ಸೃಷ್ಟಿಸಿಕೊಂಡು ನಕ್ಕು, ಅದಕ್ಕೆ ಕಾರಣರಾದ ಸೋದರಸೊಸೆ, ಸೋದರಳಿಯಂದಿರನ್ನು ಎತ್ತಿ ಮುದ್ದಾಡಿ, ತಂಗಿ ತಮ್ಮಂದಿರಿಗೆ ಬುದ್ಧಿ ಹೇಳಿ, ಗೆಳತಿಯರನ್ನು ಕಂಡು ಕಷ್ಟಸುಖ ವಿಚಾರಿಸುವುದರಲ್ಲಿ ಕಾಲ ಸರಿದದ್ದೇ ಅರಿವಾಗುವುದಿಲ್ಲ. ಅಷ್ಟರಲ್ಲಾಗಲೇ ಗಂಡನಿಂದ ಪತ್ರಗಳು ಬಂದಿರುತ್ತವೆ. ಇದೀಗ ಧರ್ಮಸಂಕಟ ಇತ್ತ ತಾಯಿತಂದೆಯರ ಅಮಿತ ಮಮತೆ ಇನ್ನೂ ತುಸುಕಾಲ ತಡೆದರೆ, ಅತ್ತ ಗಂಡನ ಕೋಪ, ಒಂಟಿಬಾಳಿನ ಚಿತ್ರ ಕೈಬೀಸಿ ಕರೆಯುತ್ತದೆ. ಕೊನೆಗೆ ಮುಖದಪ್ಪಮಾಡಿ, ಕಣ್ಣೀರುಹರಿಸಿ ಗಂಡನ ಟೀಕೆಗೆ ಸರಿಯಾಗಿ ಕಳಾಹೀನ ಮುಖ ಹೊತ್ತು ಹೋಗುವ ಅವಸ್ಥೆ ಬರುತ್ತದೆ. ಇದು ಇಂದಿನ ಜನ

ಸಾಮಾನ್ಯರ ರೀತಿಯಾದರೆ ಅತ್ತ ಹಿಂದಿನವರ ಹಾಗೂ ಜನಪದ ಸಾಹಿತ್ಯದಲ್ಲಿ ಅಳಗೊಂಡ ಹೆಣ್ಣಿನ ತಾರ ಹಂಬಲ ಬಲು ಸೊಗಸು.

ತನ್ನ ಗಂಡನಮನೆಯಲ್ಲಿ ತುಪ್ಪದಲ್ಲಿಯೇ ಕೈತೊಳೆಯುತ್ತಿದ್ದರೂ, ಪಟ್ಟೆ ಪೀತಾಂಬರಗಳನ್ನೇ ಉಡುತ್ತಿದ್ದರೂ, ತೌರಿನಲ್ಲಿ ಪ್ರೀತಿಯ ತಾಯಿ ಮಾಡಿ ಉಣಬಡಿಸಿದ ಸವಿಯ ನೆನಪು, ಬಡತನವೋ ಸಿರಿತನವೋ ಇದ್ದುದರಲ್ಲೇ ತಂದುಕೊಟ್ಟ ಉಡುಗೊರೆ ಅತ್ಯಂತ ಪ್ರಿಯವಾದುದು. ಸಿಹಿಯುಂಡು ಉಡುಗೊರೆಯುಟ್ಟು ಗಂಡನಮನೆಗೆ ಬಂದನೆಂದರೆ ತಂದುದನ್ನು ಅಕ್ಕಪಕ್ಕದವರಿಗೆ ತೋರಿಸಿದಲ್ಲದೆ ತೃಪ್ತಿಯಾಗದು. ತಾಯಿತಂದೆಯರ ಪ್ರೀತಿಯನ್ನು ಬಣ್ಣಿಸಿದಲ್ಲದೆ ನೆಮ್ಮದಿಯಾಗದು. ತಂಗಿ ತಮ್ಮಂದಿರು ಸೋದರಸೊಸೆ ಅಳಿಯಂದಿರನ್ನು ವರ್ಣಿಸಿದಷ್ಟೂ ಕಡಿಮೆಯೇ. ಇದೆಲ್ಲವನ್ನೂ ಅನುಭವಿಸಬೇಕಾದರೆ ತೌರಿನಲ್ಲಿ ಬೆಟ್ಟದಂತಹಾ ತಾಯಿದ್ದರೇನೇ ಅಲ್ಲವೇ? ...... 'ತಾಯಿಪ್ರೇತವರೆಚ್ಚು' ಎಂದೇ ನೆನೆಸುತ್ತಾಳೆ.

ಯಾರು ಇದ್ದಾರು ನನ್ನ ತಾಯವ್ವನ್ಹೋಲರ
ಸಾವಿರಕೊಳ್ಳಿ ಬಲಿಯಾಗ। ಇದ್ದರ
ಜ್ಯೋತಿ ನಿನ್ನಾರು ಹೋಲರ॥

ಎಂತಹಾ ಮುತ್ತಿನಂತಹ ಸಾಮ್ಯವಿದು! ಧಗಧಗಿಸುವ ಸಾವಿರಕೊಳ್ಳಿಗಳ ಒಲೆಯೊಳಗೆ ಇದ್ದರು ತಾನೆ ಪ್ರಕಾಶಮಾನವಾದ ಶುದ್ಧವಾದ ಒಂದು ಜ್ಯೋತಿಯನ್ನು ಸರಿಗಟ್ಟಿಯಾವೆ?

ತನ್ನ ಕಷ್ಟ ದುಃಖಗಳಲ್ಲಿ ಅವಳ ಹೃದಯ ಮೂಕವಾಗಿ ರೋದಿಸುತ್ತದೆ.....

ಹೆಣ್ಣುಮಕ್ಕಳ ದು:ಖ ಹೆತ್ತವ್ವ ಬಲ್ಲಳು
ಹುತ್ತದ ಒಳಗಿರೋ ಸರ್ಪನ। ಬೇನೆಯ
ನೆತ್ತೀ ಮೇಲಿರೋ ಶಿವಬಲ್ಲ॥

ತನ್ನ ಕೊಟ್ಟ ಮನೆಯ ಸುಖದುಃಖಗಳನ್ನು ನೆರೆಯವರೆದುರು, ಬಂಧುಬಾಂಧವರೆದುರು ಬಚ್ಚಿಟ್ಟಾಳು. ಆದರೆ ಹೆತ್ತೊಡಲ ಮುಂದೆ ಬಚ್ಚಿಡಲಾದೀತೇ?........ ಕರುಳು ಕರುಳನ್ನು ಸಂಧಿಸಿದಾಗ, ಅಡಿಯಿಂದ ಮು... ಯವರೆಗೆ ಮಗಳನ್ನು ನಿರೀಕ್ಷಿಸಿದ ತಾಯ ಕಣ್... ಗುರುತು ಹಿಡಿಯುತ್ತದೆ..........ತನ್ನ ಮಗಳಿಗೊದಗ... ಬಹುದಾದ ಸುಖದು:ಖಗಳನ್ನು.......... ಈ ಆಯಸ್ಕಾ... ತದ ಆಕರ್ಷಣೆ ಬೇರೆಲ್ಲಿ ಕಾಣಲಾರದು. ಆಗ ಮೋ... ಕರಗಿ ಮಳೆಗರೆದಂತೆ ತಾಯಿಮಕ್ಕಳ ಹೃದಯ ಕರ... ನೀರಾಗುತ್ತದೆ.

ತನ್ನ ಸುಖದು:ಖಗಳನ್ನು ತನ್ನ ಹಡೆದೊಡ... ಮುಂದಲ್ಲದೆ ಮತ್ತಾರಮುಂದೆ ತೋಡಿಕೊಳ್ಳಬೇಕು... ಆಕೆಗಿಂತಾ ಹಿತವರಾರಿದ್ದಾರು ? ತನ್ನ ಕಾಲವಾಗಿ ಮ... ಸೊಸೆಯಂದಿರ ಯಜಮಾನತ್ವದಲ್ಲಿ ತನ್ನ ಕೈಯೇನು... ನಡೆಯದೆ, ತಾನು ಹೆತ್ತ ಕಂದನ ಅನುವು ಆಪತ್ತು... ಳಿಗೆ ತಾನೇನೂ ಮಾಡಲಾರದ ಅಸಹಾಯಕಳಾದರೂ... ತಾಯಿಯ ತಲೆಕೂದಲು ಹಣ್ಣಾಗಿ, ನಡುಬಾಗಿ... ಕಣ್ಣು ಮಂಜಾಗುವವರೆಗೆ ಪಟ್ಟ ಕಷ್ಟಸುಖಗಳ ಅನ... ಭವದ, ತಾಳಿದವಳು ಬಾಳಿಯಾಳೆಂಬ ಸಾಂತ್ವನದ... ಹಾಲ್ಜೇನಿನಂತಹಾ ಪ್ರೀತಿ ವಿಶ್ವಾಸಗಳ ಮುಂದೆ ಮಗ... ದು:ಖವೆಲ್ಲ ಮರೆತು ಹಗುರಾಗುತ್ತದೆ. ಇಂಥ... ತಾಳ್ಮೆಯೇ ಮೂರ್ತಿವೆತ್ತ ಭೂದೇವಿಯಂತ ಹ... ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ನಾನು ಪುಣ್ಯವಂತೆ... ಆಕೆ ಪಟ್ಟಿರುವ ಕಷ್ಟ ಕೋಟಲೆಗಳ ನೂರರ ಒಂದಂ... ವನ್ನು ನಾನು ಪಟ್ಟೇನೇ........ ಅವಳ ತಾಳ್ಮೆಯ ತೃಣ... ಭಾಗ ತನ್ನದಾಗಿದ್ದೀತೇ .......... ಹೆಣ್ಣು ಹೆಣ್ಣೇ ........ ತಾನೆಷ್ಟು ತನ್ನ ಕಂದನಿಗೆ ಸಮಾಧಾನ ಹೇಳಿದರೂ... ತಾನೆಷ್ಟು ಇಡೀ ಬಾಳಿನಲ್ಲಿ ಗಂಡನ ಕೈಹಿಡಿದಂದಿನಿಂ... ಕಣ್ಣೀರಿನಲ್ಲೇ ಕೈತೊಳೆದಿದ್ದರೂ ತನ್ನ ಕರುಳಿನ ಕುಡಿಗ... ಒದಗಿದ ಕಷ್ಟದುಃಖಗಳನ್ನು ಕಂಡು ಕೆಲವೊ ಮ್ಮೆ... ಮನಸ್ಸು ರೊಚ್ಚಿಗೇಳುತ್ತದೆ. ಸಿಟ್ಟಾಗಿ ದೇವರನ್ನೇ ಹ... ಯುತ್ತಾಳೆ. ಆಗ ಸಮಾಧಾನ ಮಾಡುವ ಸರದಿ ಮಗ... ಳದು.

ಹೆಣ್ಣು ಹಡೆಯಲಿಬ್ಯಾಡ। ಹೆರವರಿಗೆಕೊಡಬ್ಯಾಡ...
ಹೆಣ್ಣು ಹೋಗ್ಯಾಗ ಅಳಬೇಡ। ಹಡೆದವ್ವ
ಸಿಟ್ಟಾಗಿ ಶಿವಗ ಬೈಬ್ಯಾಡ॥

ತಾನು ಕಟ್ಟಿತಂದ ಕರ್ಮದ ಬುತ್ತಿ ತಾನೇ ಉಣಬೇಕಲ್ಲವೆ?...........ತನ್ನ ವಿಧಿಬರೆಹ ಬಹಳಷ್ಟು ಕ್ರೂರವಾಗಿರುವಾಗ ಅದನ್ನು ಅಳಿಸಲು ಸಾಧ್ಯವೇ?...........ಹೆತ್ತವರು ಹಾಲುತುಪ್ಪವನ್ನೇ ಎರೆದು ಮುಚ್ಚಿಟ್ಟು ಸಾಕಿಯಾರು ಹಾಗೆಂದು ಹಣೆಯಲ್ಲಿ ಬರೆದಾರೇ? ಆದ್ದರಿಂದ ಯಾರು ಯಾರನ್ನು ನಿಂದಿಸಿಯೂ ಫಲವಿಲ್ಲ. ತಾನು ತಂದದ್ದು ತನಗೆ.....ಹಣವಿದ್ದವನನ್ನು ಕೂಡಿದರೂ ಋಣವಿದ್ದಷ್ಟೇ ಸಂದೀತು ಎಂದು ತನ್ನ ತಾನೇ ಸಮಾಧಾನ ಮಾಡಿಕೊಳ್ಳುತ್ತಾಳೆ.

ಆದರೆ ಎಂತಹಾ ಕಠಿಣ ಪರಿಸ್ಥಿತಿಯಲ್ಲೂ ಹೆಣ್ಣಿಗೆ ತನ್ನ ತಾಯವ್ವನನ್ನು ನೆನೆದರೆ ಒಡಲು ತಂಪಾಗುತ್ತದೆ. ಎಂದೇ ಅನವರತ ನೆನೆಸುತ್ತಿರುತ್ತಾಳೆ ಮೌನವಾಗಿ.

''ಬ್ಯಾಸಗಿ ದಿವಸಕ ಬೇವೀನ ಮರತಂಪ|
ಭೀಮರತಿಯೆಂಬ ಹೊಳಿತಂಪ| ಹಡೆದಮ್ಮ
ನೀ ತಂಪ ನನ್ನ ತವರೀಗ||
ತಂದೀಯ ನೆನೆದಾರ ತಂಗಳು ಬಿಸಿಯಾಯ್ತು|
ಗಂಗಾದೇವಿ ನನ್ನ ಹಡೆದವ್ವ| ನೆನೆದರ
ಮಾಸೀದ ತಲೆಯು ಮಡಿಯಾಯ್ತು||

ಹುಟ್ಟಿದಂದಿನಿಂದ ಸಾಕಿಸಲಹಿದ ತಾಯಿತಂದೆಗಳು; ಕೂಡಿ ಆಡಿ ಪಾಡಿದ ಅಣ್ಣ-ತಮ್ಮ, ಅಕ್ಕ-ತಂಗಿ; ಬಂಧುಬಾಂಧವರನ್ನು ಬಿಟ್ಟು, ತಾನು ಬೆಳೆದ ವಾತಾವರಣವನ್ನೇ ತ್ಯಜಿಸಿ, ಕಾಣದ ಪರಿಚಯವಿಲ್ಲದ ಗಂಡನ ಕೈಹಿಡಿದು, ಆತನೇ ತನಗಿನ್ನು ಸಕಲವೂ ಎಂದುಭಾವಿಸಿ ನಂಬಿ ಹಿಂಬಾಲಿಸುತ್ತಾ, ತನ್ನ ಇಂದಿನವರೆಗಿನ ಸಕಲ ಏಳ್ಗೆಗೂ, ಪುರೋಭಿವೃದ್ಧಿಗೂ ಕಾರಣರಾದ ಪ್ರೀತಿಯ ತೌರಿನ ನೆನಪಿನಲ್ಲೇ ಕನಸುಕಂಡು ಬದುಕುವ ಹೆಣ್ಣಿನ ತ್ಯಾಗ ನಿಜಕ್ಕೂ ಹಿರಿದಲ್ಲವೇ?

---

# ಬಯಕೆ *

ಬೆಟ್ಟದಾಬಳಿಯಲ್ಲಿ ಇರಲೆನ್ನ ಕುಟಿಯೊಂದು
ಜೇನುಗೂಡಿನ ದನಿಯು ಕಿವಿಸೋಂಕಲಿ;
ದಡದಲ್ಲಿ ಮರವುಳ್ಳ ತಿರುವಿನಾ ನದಿಯೊಂದು
ಅಲ್ಲಲ್ಲೆ ಧುಮುಕುತ್ತ ಹರಿಯುತಿರಲಿ.

ಚಾವಣಿಯ ಕೆಳಗೊಂದು ಹಕ್ಕಿಯದು ಆಗಾಗ
ಗೂಡಬಳಿ ಹಾರುತ್ತ ಹಾಡುತಿರಲಿ;
ಬರಬರಲಿ ಯಾತ್ರಿಕನು ಬಾಗಿಲನು ನೂಕುತ್ತ
ಪಾಲುಪಡೆಯಲಿ ನನ್ನ ಭೋಜನದಲಿ.

ನನ್ನ ಭವನದ ಸುತ್ತ ಇಬ್ಬನಿಯು ನೀಂಟಿದಾ
ಹೂವುಗಳು ಪರಿಮಳವ ಸೂಸುತಿರಲಿ;
ಲೂಸಿ-ಸತಿ, ನಿಲುವಂಗಿ ಮೇಲ್ಪಟ್ಟಿಗಳ ತೊಟ್ಟು
ನೂಲುವಾಚಕ್ರದೆಡೆ ತಾ ಹಾಡಲಿ.

ವೃಕ್ಷರಾಜಿಯ ನಡುವೆ ಚರ್ಚೊಂದು ಇರಲಲ್ಲಿ
ನಮ್ಮ ಮದುವೆಯ ವಿಧಿಯ ನೆನಪು ತರುತ;
ಅದರ ಗಂಟೆಯ ನಿನದ ನಾಕದೆಡೆ ಹೋಗಲದು
ಗೋಪುರದ ತುದಿಯಿಂದ ಪಸರಿಸುತ್ತ.

*Samuel Rogers ಕವಿಯ A wish ಎಂಬ ಕವನದ ಭಾವಾನುವಾದ.

"ಪುಲಿಕೇಶಿ"

---

# ಬಸವಣ್ಣನವರ ವಚನಗಳಲ್ಲಿ ಜೀವನದರ್ಶನ

ಲೇಖಕ :
**ಕೆ. ಪಿ. ಶಿವಲಿಂಗಯ್ಯ**

ಇಡಿಯ ಮಾನವ ಕೋಟಿಗೇ ಲೇಸ ಬಯಸುವ,
ಒಳಿತನ್ನು ಮಾಡುವ ಸತ್ಯ ಸಂಕಲ್ಪವುಳ್ಳವರು ಮಹಾ
ನುಭಾವರು. ಕಾರಣಿಕರೆಂದೂ ಅ ವ ರ ನ್ನು ಜನ
ಕರೆಯುತ್ತಾರೆ. ಲೋಕಹಿತವೇ ತಮ್ಮ ಹಿತ ಎಂದು
ಅವರು ಸದಾ ಜಗತ್ಕಲ್ಯಾಣ ಕಾರ್ಯಗಳನ್ನು ತ್ರಿಕರಣ
ಪೂರ್ವಕವಾಗಿ ಎಸಗುತ್ತಾರೆ. ಬ ಸ ವ ಣ್ಣ ನ ವ ರು
ಅಂತಹ ಮಹನೀಯರಲ್ಲಿ ಒಬ್ಬರು.

ವೈದಿಕ ಮನೆತನದಲ್ಲಿ ಜನಿಸಿ. ಗುರು ಕಾರುಣ್ಯ
ದಿಂದ ಅಪಾರ ಜ್ಞಾನವನ್ನು ಗಳಿಸಿ, ಹುಟ್ಟಿದ ಮನೆ
ಯನ್ನೇ ತ್ಯಜಿಸಿ, ತಮ್ಮ ಇಷ್ಟ ದೈವವಾದ ಕೂಡಲ
ಸಂಗಮನಾಥನ ಸಾನ್ನಿಧ್ಯದಲ್ಲಿ ಸಾಧಕರಾಗಿ ಭವಿಷ್ಯ
ಜೀವನಕ್ಕೆ ಬೇಕಾದ ಎಲ್ಲ ಮಾರ್ಗಗಳನ್ನೂ ಕಂಡು
ಕೊಂಡ ಮಹಾಜೀವಿ ಬಸವೇಶ್ವರರು. ಮು ಂ ದೆ
ಕಲ್ಯಾಣದ ಮಹಾ ಮಂತ್ರಿಯಾಗಿ, ಇಬ್ಬರು ಪತ್ನಿಯ
ರುಳ್ಳ ಕೌ ಟು ಂ ಬಿ ಕ ಹೊರೆ ಹೊತ್ತು-ಹೊದ್ದರೂ
ಹೊದ್ದಲೀಯದೆ ಅಂಟಿಯೂ ಅಂಟದಂತೆ, ಇಹ-ಪರ
ಸಮನ್ವಯದ ಮಾರ್ಗ ತೋರಿದ ಜಗದಾಚಾರ್ಯ
ರವರು. ಆದರೆ ಆಚಾರ್ಯ-ಆರಾಧ್ಯ ಮುಂತಾದ
ಹೆಸರಿಗೆ ಜೋತು ಬಿದ್ದವರಲ್ಲ.

ಇಂತಹ ಅದ್ಭುತ ಜೀವಿ ಜಗತ್ತಿನ ಉದ್ಧಾ
ಕ್ಕಾಗಿ ಮಾಡಿದ ಕಾರ್ಯಗಳಾದರೂ ಒಂದೆರಡಲ್ಲ
ಸುಲಭವಾದವೂ ಅಲ್ಲ. ಮೇಲು ಕೀಳುಗಳೆಂಬ ಭೇ
ಭಾವನೆಯನ್ನು ತೊಡೆದು ಹಾಕಿ, ಅಸ್ಪೃಶ್ಯತಾ ನಿವಾ
ರಣೆ, ಸ್ತ್ರೀ-ಪುರುಷ ಸಮಾನತೆ ಮುಂತಾದ ಅನೇ
ಸತ್ಕಾರ್ಯಗಳನ್ನು ಯಾವ ಎಡರು-ತೊಡರುಗಳನ್ನೂ
ಲೆಕ್ಕಿಸದೆ ಸಾಧಿಸಿದ ಮಹಾಪುರುಷರು ಅವರು. ಅನು
ಭವ ಮಂಟಪದ ನಿರ್ಮಾಣವಂತೂ ಬಸವಣ್ಣನವರ
ಆ ಕಾಲದ ಜನರ ಸ್ಥಿತಿಗತಿಗಳ ಬಗೆಗೆ ಉಂಟಾದ ಸಾನು
ಕಂಪದ ದ್ಯೋತಕ.

ಹೀಗೆ ಕ್ರಾಂತಿಕಾರಿಯಾಗಿ ಸಮಾಜೋದ್ಧಾ
ಕಾರ್ಯದಲ್ಲಿ ತೊಡಗಿದ ಅಣ್ಣನವರು ತಾವು ರಚಿಸಿದ
ವಚನಗಳಲ್ಲಿ ಮಾನವ-ಜೀವನವನ್ನು ಎಲ್ಲ ದೃಷ್ಟಿಗ
ಳಿಂದಲೂ ನೋಡಿದ ರೀತಿಯನ್ನು ಚಿತ್ರಿಸಿದ್ದಾರೆ
ಜೊತೆಗೆ ತಮ್ಮ ಮಾ ನ ವೀ ಯ ವ್ಯಕ್ತಿತ್ವವನ್ನು
ಕೊಂಚವೂ ಮರೆಯದೆ ನಾನಾ ವಚನಗಳಲ್ಲಿ ಅಭಿ
ವ್ಯಕ್ತಗೊಳಿಸಿದ್ದಾರೆ. ಅವರ ವಚನಗಳಲ್ಲಿನ ಬೋಧೆ
ಸಾರ್ವಕಾಲಿಕವಾದದ್ದು ಹಾಗೂ ಯಾರಿಗೂ ಅವಶ್ಯ
ಬೇಕಾದ್ದು. ದ್ರಷ್ಟಾರರ ದರ್ಶನ ಅವರ ವಚನಗಳ
ಉದ್ದಕ್ಕೂ ಹಾಸು ಹೊಕ್ಕಾಗಿ ಸಂಮಿಳಿತವಾಗಿದೆ.

ಬಹುತೇಕವಾಗಿ ಬಸವಣ್ಣನವರ ಆತ್ಮ – ಪರಿಶೋಧ ದಿಂದೊಡಗೂಡಿದ ವಚನ-ಕಾರ್ಯಗಳಿಂದಲೇ ಅವರು ಜೀರ್ಣೋದ್ಧಾರ ಮಾಡಿದ (ವೀರಶೈವ) ಧರ್ಮ ವಿಶ್ವ ಧರ್ಮವೆನಿಸಲು ಸಾಧ್ಯವಾಗಿರುವುದು.

ಈಗ ಅಣ್ಣನವರು ಶ್ರೀ ಸಾಮಾನ್ಯನ ಉದ್ಧಾರದ ಸಲುವಾಗಿ ತಮ್ಮ ಜೀವನವನ್ನು (ತಾವು ರಚಿಸಿದ ನುಡಿಗಡಣದಲ್ಲಿ) ಹೇಗೆ ಚಿತ್ರಿಸ ಹೊರಟಿದ್ದಾರೆ-ಎಂಬು ದನ್ನು ನೋಡೋಣ:—

[ಇಲ್ಲಿ ಅಣ್ಣನವರು ಪ್ರೌಢರಾದ ಮೇಲೆಯೇ ವಚನ ರಚಿಸಿರುವರಾದರೂ, ಸಿಂಹಾವಲೋಕನ ಕ್ರಮದಿಂದ ತಮ್ಮ ಹಿಂದಣ ಜೀವನವನ್ನು ಸ್ಮರಿಸಿ, ಅದಕ್ಕೆ ತಕ್ಕ ಸುಂದರ ಕಲ್ಪನೆ ಕೊಟ್ಟಿದ್ದಾರೆ.]

ಬಾಲ್ಯದಲ್ಲಿ ಜೊತೆಯ ಮಕ್ಕಳೊಂದಿಗೆ ಆಟ ವಾಡುವಾಗ ತಮ್ಮ ಅಂತರಂಗದಲ್ಲಿ ಹೆಣ್ತನವನ್ನು ರೂ (ಆರೋ)ಪಿಸಿಕೊಂಡು, ದೇವನನ್ನು ಅರ್ಚಿಸ ಬಯಸಿದ ರೀತಿ ಈ ವಚನದಲ್ಲಿ ಸಉಕ್ತವಾಗಿದೆ:

"ಬಿಳಿಯ ಕರಿಕೆಯ:, ಕಣಿಗಿಲೆಲೆಯ
ತೊರೆಯ ತಡಿಯ ಮಳಲ ತಂದು,
ಗೌರಿಯ ನೋನುವ ಬನ್ನಿರೇ !
ಚಿಕ್ಕ ಚಿಕ್ಕ ಮಕ್ಕಳೆಲ್ಲರು ನೆರೆದು,
ಅನುಪಮದಾನಿ ಕೂಡಲ ಸಂಗಮದೇವ
ಗಂಡನಾಗಬೇಕೆಂದು."

ವೀರಶೈವ ತತ್ವದ ಪ್ರಕಾರ "ಶರಣಸತಿ-ಲಿಂಗಪತಿ" –ಈ ದಿವ್ಯ ದಾಂಪತ್ಯ ಭಕ್ತನನ್ನು ದೇವನೆಡೆಗೆ ಒಯ್ಯ ಬಲ್ಲ ಸುಲಭ ಸಾಧನ. ಇಲ್ಲಿ ಅಣ್ಣ ತನ್ನನ್ನು ಹೆಣ್ಣೆಂದು ಅದೂ, ಲಿಂಗಪತಿಯೊಡನೆ ಇನ್ನೂ ವಿವಾಹ ಇಲ್ಲದ ಕನ್ಯೆಯಾಗಿ ಪರಿಭಾವಿಸಿ ತಾನು ಬಯಸಿದ (ಆ) ಪತಿ ದೊರೆಯಲಿ–ಎಂದು ಗೌರಿಯನೋಂಪಿ ಯಾಟವಾಡುವ ಬಣ್ಣನೆಯನ್ನು ಚಿತ್ರಿಸಿದ್ದಾರೆ

ಆಟದಲ್ಲಿರುವಂತೆಯೇ ಪಾಠ-ಪ್ರವಚನಗಳಲ್ಲಿ ಕೂಡ ಅಣ್ಣನಿಗೆ ಶ್ರದ್ಧೆ-ಉತ್ಸಾಹಗಳು ಅತುಲವಾಗಿ ದ್ದವು. ಆದರೆ ಪಾಠಶಾಲೆಯ ಶುಷ್ಕ ಪಾಠ-ಪದ್ಯ ಗಳಿಗಿಂತ ಭಕ್ತಿ ರಸದ ಸವಿ ಬೇಕಾಗಿತ್ತು. ಆ ಬಗೆಗೆ ಹಂಬಲಿಸಿದ್ದಾರೆ.

"ಅಭ್ಯಾಸವೆನ್ನ ಪರಿಸಿತ್ತಯ್ಯ ;
ಭಕ್ತಿ ಸಾಧ್ಯವಾಗದು ನಾನೇನೇವೆನಯ್ಯ.........
ಹತ್ತು ಸಾವಿರ ಗೀತವ ಹಾಡಿ,
ಅರ್ಥವಿಟ್ಟಲ್ಲಿ ಫಲವೇನು ?
ಮುಟ್ಟುವ ತೆರನನರಿಯದನ್ನಕ್ಕ ?..........."

ಈ ರೀತಿ ಜಿಜ್ಞಾಸೆಯಲ್ಲಿರುವಾಗ ವೇದಶಾಸ್ತ್ರಗಳ ಪಾಠ ಸಹ ಪ್ರಾರಂಭವಾಯಿತು. ಆಗಲೂ ಅವರಿಗೆ ತೃಪ್ತಿ ಲಭಿಸಲಿಲ್ಲ:

"ವೇದವ ನೋದಿದರೇನು ?
ಶಾಸ್ತ್ರವ ಕೇಳಿದರೇನಯ್ಯ ?
ಜಪವ ಮಾಡಿದರೇನು ?
ತಪವ ಮಾಡಿದರೇನು ?........." ಇತ್ಯಾದಿ.

ಯಾರಿಂದಲೂ ಅವರ ಈ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ದೊರೆಯದಾಗ, ನಿರಾಶೆ ಒಡಮೂಡುವುದು ಸ್ವಾಭಾವಿಕ.

ಆದರೆ ಕುತೂಹಲದಿಂದ ಸಿಕ್ಕಿದ್ದನ್ನು ಓದು ತ್ತಿದ್ದ ಈ ಕುತೂಹಲದ ಜೀವಿಗೆ ಒಮ್ಮೆ ಓಲೆಯ ಸಂಪುಟವೊಂದರಲ್ಲಿ ಸಿಕ್ಕಿದ ಆದ್ಯರ (ಹಿಂದಣ ಪುರಾ ತನರ) ವಚನಗಳನ್ನು ಓದಿದಾಗ ಆತ್ಮಾನಂದವಾ ಯಿತು:

"ಆದ್ಯ - ವಚನ ಪರುಷ ಕಂಡಯ್ಯ
ಸದಾಶಿವನೆಂಬ ಲಿಂದಗ ನಂಬುವುದು,
ನಂಬಲೊಡನೆ ನೀ ವಿಜಯ ಕಂಡಯ್ಯ.
ಅಧರಕ್ಕೆ ಕಹಿ, ಉದರಕ್ಕೆ ಸಿಹಿ,
ಕೂಡಲ ಸಂಗನ ಶರಣರ ವಚನ:ಬೇವ ಸವಿದಂತೆ"

ರೋಗಿ ಬಯಸಿದ್ದೂ-ವೈದ್ಯ ಹೇಳಿದ್ದೂ ಒಂದೇ– ಎಂಬಂತೆ ಆ ಪುರಾತನರ ವಚನ-ಹಾಡುಗಬ್ಬಗಳಲ್ಲಿ

ಶಿವನ ಸ್ತುತಿ-ಶಿವಭಕ್ತರ-ಮಹಿಮೆ..... ಮುಂತಾದು ವಿದ್ದುದರಿಂದ ಮೊದಲೇ ಆ ಕಡೆಗೆ ಒಲಿದಿದ್ದ ಅಣ್ಣನ ವರಿಗೆ ಅವು ಆಪ್ಯಾಯಮಾನವಾಗಿ ತೋರಿದು ಅಸಂಭವವೇನಲ್ಲ. ಇಲ್ಲಿ ರೋಗ ವಾಸಿಯಾಗಬೇಕಾದರೆ ನಾಲಗೆಗೆ ಕಹಿಯಾದ ಔಷಧ ಸೇವಿಸಬೇಕು, ಬೇವಿನ ಕಷಾಯಿ ಇಂದಿಗೂ ಸರ್ವರೋಗ ನಿವಾರಿಣಿಯೆನಿಸಿರುವುದನ್ನು ನಾವು ಕಾಣಬಹುದು ಅಣ್ಣನವರ ಬೇವು-ಅರ್ಥಾತ್ ಶರಣರ ವಚನ 'ಭವ - ರೋಗ ನಿವಾರಿಣಿ! ......

ಅಲ್ಲಿಂದ ಮುಂದೆ ಪಾಠಶಾಲೆಯ ಪಾಠಗಳು ಸುತರಾಂ ರುಚಿಸಲಿಲ್ಲ. ಈ ಸ್ವಭಾವ ಎಲ್ಲ ಪ್ರತ್ಯುತ್ಪನ್ನಮತಿಗಳಾದ [ಟಾಗೂರ್, ಸ್ವಾಮಿ ವಿವೇಕಾನಂದ...... ...... ಮುಂತಾದವರು.] ಜಾಗತಿಕ ವ್ಯಕ್ತಿಗಳಿಗೂ ಅನ್ವಯಿಸುವಂಥದು. ಆದರಿಂದ ಶಾಲೆಯಲ್ಲಿ ಉಪಯೋಗಿಸುವ ಹಲಗೆ-ಅಲಗು (ಬಳಪ) ಗಳು ಕೆಲಸಕ್ಕೆ ಬಾರದಾದುವು:

"ಸಮ ಚಿತ್ತವೆಂಬ ನೇಮದ ಹಲಗೆಯ ಹಿಡಿದು,  
ಶಿವ ಚಿತ್ತವೆಂಬ ಕೂರಲಗ ಕೊಂಡು,  
ಶರಣಾರ್ಥಿಯೆಂಬ ಶ್ರವಗಲಿತಡೆ  
ಆಳುತನಕ್ಕೆ ದೆಸೆಯಷ್ಟೆನೋಡಾ.........."

ಇಂತಹ ಅತ್ಯಂತ ಶ್ರೇಷ್ಠವಾದ ಸಾಧನಗಳನ್ನು ಒಂದು ಬಿಟ್ಟು ಮತ್ತೊಂದಿರದ ಸಾಮಗ್ರಿಗಳನ್ನು-ಉಪಯೋಗಿಸಿ ಆದ್ಯರ ವಚನಗಳನ್ನು ಅಭ್ಯಸಿಸಿದ್ದಲ್ಲದೆ, ತಾವೂ ತನ್ನಂತರಂಗದಲ್ಲಿ ಉದ್ಭವಿಸಿದ ದಿವ್ಯಾನುಭವಗಳನ್ನು ವಚನ ರೂಪದಲ್ಲಿ ಹೆಣೆಯ ತೊಡಗಿದರು.

ಅಣ್ಣನು ಗರಡಿ ಮನೆಯಲ್ಲಿ ಮಲ್ಲ ವಿದ್ಯೆಯನ್ನು ಅಭ್ಯಾಸ ಮಾಡಿದ ಬಗೆ ಇಂತಿದೆ:

"ಗರಡಿಯ ಕಟ್ಟೆ ಅರವತ್ತು ನಾಲ್ಕು ಕೋಲು ಅಭ್ಯಾಸವ ಮಾಡಿದೆನಯ್ಯ. ಇರಿವಗಾಯ ಖಂಡೆಯ ಭೇದವನ್ನು ತಿಳಿಯದು. ಪ್ರತಿ ಗರುಡಿಕಾರ ಬಿರಿದ ಪಾಡಿಂಗೆ ಒಡಗಲು, ವೀರ ಪಟ್ಟೆಯ ಕಟ್ಟಿ ತಿಗುರಿಯ ನೇರಿಸಿಕೊಂಬೆ. ಗುರುಕಳನನೇರಿ ಕ ಠಾ ರಿ ಯ ಕೊಂಡಲ್ಲಿ ಹೋಯ್ತಿತ್ತಾಗಳೆ ಎಂದಡೆ, ಎನ್ನ ನಿಮ್ಮಲ್ಲಿ ನೋಡು ಕೂಡಲ ಸಂಗಮದೇವ."

—ಇದು ಅಣ್ಣನ ಅರವತ್ತು ನಾಲ್ಕು ಕೋಲಿನ ಅಭ್ಯಾಸದ ಪರಿಣತಿ.

ಇದರ ಜೊತೆಗೆ ಮೂವತ್ತೆರಡು ಆಯುಧಗಳ ಅಭ್ಯಾಸವು ನಡೆದಿತ್ತೆಂಬುದು, "ಬತ್ತೀಸಾಯುಧದಲ್ಲಿ ಅಭ್ಯಾಸವ ಮಾಡಿದರೇನು ? ಹಗೆಯ ಕೊಲುವಡೊಂದಲಗು ಸಾಲದೇ ?..........." ಎಂಬ ಉಕ್ತಿಯಿಂದ ತಿಳಿಯುತ್ತದೆ.

ತನ್ನ ಅನುಭವ ಬೆಳೆ ಬೆಳೆಯುತ್ತ ಯಾವ ಆಯುಧದ ಅಗತ್ಯವೂ ಇಲ್ಲವೆಂದು ಗೊತ್ತಾಗುತ್ತದೆ. ಈ ಕಾರುಣ್ಯಾಬ್ಧಿಗೆ ಆಗಲೇ

"ದಯವಿಲ್ಲದ ಧರ್ಮವಾವುದಯ್ಯ ?  
ದಯವೇ ಧರ್ಮದ ಮೂಲವಯ್ಯ.  
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ,  
ಕೂಡಲ ಸಂಗಮದೇವ ನಂತಲ್ಲದೊಲ್ಲನಯ್ಯ"  
-ಎಂಬ ಉದ್ಗಾರ ಹೊರಹೊಮ್ಮಿದುದು.

ಮುಂದೆ ಪ್ರಾಪ್ತವಯಸ್ಕನಾದಾಗ, ಮನೆ—ಮಾರು ಮಾಡಿಕೊಂಡು ಅವನ್ನು ಕೈಲಾದ ಮಟ್ಟಿಗೂ ಚೊಕ್ಕಟವಾಗಿಟ್ಟಿರುತ್ತಾರೆ. ಅಣ್ಣ ಬೇರೆ ಕಾರ್ಯಗೌರವಗಳಲ್ಲಿ ನಿಯುಕ್ತರಾಗಿ ಹೆಚ್ಚುಕಾಲ ಹೊರಹೋಗಿದ್ದಾಗ, ಸೇವಕರು ಮನೆಯನ್ನು ಸರಿಯಾಗಿ ನೋಡಿಕೊಳ್ಳದೆ ಅದು ದುರವಸ್ಥೆಗೊಳಗಾಗುತ್ತದೆ. ಆಗ ಹೊರ ಬಂದ ವಚನ-

"ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ  
ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ ?  
ತನುವಿನಲ್ಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ  
ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲ ಸಂಗಮದೇವ."

ಪ್ರತಿಯೊಬ್ಬರೂ ತಂತಮ್ಮ ಮನೆಯ ಹೊರ-ಒಳಗನ್ನು ಹಸನಾಗಿರಿಸಬೇಕಾದ್ದು ಎಷ್ಟು ಅಗತ್ಯವೋ ಅಷ್ಟೇ ಅಗತ್ಯ-ತಂತಮ್ಮ ತನುಮನಗಳನ್ನು ಹುಸಿ-ವಿಷಯ ವಾಸನೆಗಳ ಸೋಂಕಿಲ್ಲದೆ ಪವಿತ್ರವಾಗಿಡ ಬೇಕಾದ್ದು.

ತನ್ನ ಇಷ್ಟ ದೈವದ ಭಜನೆಯಲ್ಲಿ ಶ್ರುತಿಯಿಡಲು ಅಣ್ಣ ಸಂಪಾದಿಸಿದ್ದ ತಂಬೂರಿಯಾದರೂ ಹೀಗಿದ್ದಿತು:

"ಎನ್ನ ಕಾಯವ ದಂಡಿಗೆಯ ಮಾಡಯ್ಯ.
ಎನ್ನ ಶಿರವ ಸೋರೆಯ ಮಾಡಯ್ಯಾ:
ಎನ್ನ ನರವ ತಂತಿಯ ಮಾಡಯ್ಯಾ.
ಎನ್ನ ಬೆರಳ ಕಡ್ಡಿಯ ಮಾಡಯ್ಯ.
ಬತ್ತೀಸ ರಾಗವ ಹಾಡಯ್ಯ.
ಉರದ ಲೊತ್ತಿ ಬಾರಿಸು ಕೂಡಲಸಂಗಮದೇವ."

ಕಾಯದ ದಂಡಿಗೆ, ಶಿರದ ಸೋರೆ, ನರದ ತಂತಿ, ಮೂವತ್ತೆರಡು ರಾಗಗಳ, ಸಂಪತ್ತಿ, ಹೃದಯ ಮಾಧುರ್ಯ..............ಇದಕ್ಕಿಂತ ಉತ್ತಮವಾದ ತಂಬೂರಿ ಬೇಕೆ ? ಎಂತಹ ಅದ್ವಿತೀಯ ರೂಪಕವಿದು! ಈ ವಚನ ನಿಜಕ್ಕೂ ಉತ್ತಮ ಭಾವಗೀತೆಯಂತಿದೆ.

ರೋಗ ರೋಗಗಳೆಲ್ಲೆಲ್ಲ ಅಧಿಕವಾದದ್ದು-ಭವರೋಗ. ಇದನ್ನು ಕಳೆವ ಔಷಧಿ, ಗುಣಪಡಿಸುವ ವೈದ್ಯ ಹೀಗಿದ್ದಾರೆ-

"ಗುರು ಉಪದೇಶ ಮಂತ್ರವೈದ್ಯ.
ಜಂಗಮ ಉಪದೇಶ ಶಸ್ತ್ರ ವೈದ್ಯ ನೋಡಾ
ಭವರೋಗವ ಕಳೆವ ಪರಿಯ ನೋಡಾ;
ನಮ್ಮ ಕೂಡಲ ಸಂಗನ ಶರಣರ ಅನುಭಾವ
ಗಜವೈದ್ಯ. "

ಈ ಜನ್ಮಾಂತರ ರೋಗವನ್ನು ಹೋಗಲಾಡಿಸಲು ಗುರು, ಜಂಗಮ, ಶರಣರು--ಇವರೇ ತಕ್ಕ ವೈದ್ಯರೆಂದು ಜಗತ್ತಿಗೆ ಪರಿಚಯಮಾಡಿಕೊಟ್ಟರು ಬಸವಣ್ಣನವರು. ಆತ್ಯಂತಿಕ ಸುಖದ ಗಳಿಕೆಯ ಗುಟ್ಟು ಇದೇ ಅಲ್ಲವೆ ?

ಅಣ್ಣನ ಬೇಸಾಯವಂತೂ ವಿಚಿತ್ರ ರೀತಿಯದು; ಅದು ಒಂದು ನಿಷ್ಕಾಮ ಕರ್ಮ :

"ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು, ನಾನು ಬೆವಹಾರವ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು, ನಾನಾವ ಕರ್ಮಂಗಳಮಾಡಿದಡೆಯೂ ಆ ಕರ್ಮದ ಫಲಭೋಗವ ನೀ ಕೊಡುವೆ ಎಂಬುದ ನಾ ಬಲ್ಲೆನು. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ಮಾಡೆನು. ನಿಮ್ಮ ಸೊಮ್ಮು ನಿಮಗೆ ಕಲಿಸುವೆನು. ನಿಮ್ಮಾಣೆ ಕೂಡಲಸಂಗಮ ದೇವ."

ದೇವನು ಕರುಣಿಸಿದ ಪಡಿಪದಾರ್ಥಗಳನ್ನು ಅದೂ ಬೆವರು ಸುರಿಸಿ (ಸತ್ಯಶುದ್ಧಕಾಯಕದಿಂದ) ದುಡಿದು ಅವನಿಗೇ ಅರ್ಪಿಸಬೇಕೆಂಬ ಶಿವಾರ್ಪಣಭಾವದ ಉತ್ಕಟೇಚ್ಛೆ ಇಲ್ಲಿ ಅಭಿವ್ಯಕ್ತವಾಗಿದೆ.

ದುಷ್ಟ ಜನಗಳನ್ನು ತಿದ್ದಲು ಪ್ರಯತ್ನಿಸಿ ವಿಫಲರಾದಾಗ ಅಣ್ಣನವರು ಹೀಗೆ ಉದ್ಗಾರ ತೆಗೆದಿದ್ದಾರೆ:

"ಬೇವಿನ ಬೀಜವ ಬಿತ್ತಿ,
ಬೆಲ್ಲದ ಕಟ್ಟೆಯ ಕಟ್ಟಿ,
ಆಕಳ ಹಾಲನೆರೆದು;
ಜೇನುತುಪ್ಪವ ಹೊಯ್ದರೆ
ಸಿಹಿಯಾಗಬಹುದೆ-ಕಹಿಯಹುದಲ್ಲದೆ?
ಶಿವಭಕ್ತರಲ್ಲದವರ ಕೂಡೆ ನುಡಿಯಲಾಗದು
ಕೂಡಲಸಂಗಮದೇವ."

-ಏನೇ ಆದರೂ ಬೇವು ತನ್ನ ಕಹಿಯನ್ನು ಬಿಟ್ಟೀತೆ? ಅಂತೇ ಭಕ್ತಿ-ಭಾವವಿಲ್ಲದವರ ನಡೆ-ನುಡಿಗಳನ್ನು ತಿದ್ದಲು ಸಾಧ್ಯವೆ?

ಸ್ವಯಂ ತಮ್ಮ ಮನಸ್ಸಿನ ಬಗೆಗೇ ಜಿಗುಪ್ಸೆ ಪಟ್ಟಂತೆ ನುಡಿದಿದ್ದಾರೆ:

"ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ
ವಿಚಾರಿಸಿದರೆ ಏನೂ ಹುರುಳಿಲ್ಲವಯ್ಯ
ಪ್ರಪಂಚಿನ ಡಂಭಿನಲ್ಲಿ ಎನ್ನನೊಂದು ರೂಪುಮಾಡಿ
ನೀವಿರಿಸಿದಿರಯ್ಯ ಕೂಡಲಸಂಗಮದೇವ"

–ಇದು ಅಣ್ಣನವರ ಅಂತರ್ನಿರೀಕ್ಷಣೆ. ಹುಳುಗಳಿಲ್ಲದ ಅತ್ತಿಯ ಹಣ್ಣು ಎಷ್ಟು ಅಪರೂಪವೋ, ಅಷ್ಟೇ ವಿರಳ ದುರ್ಗುಣಗಳಿಲ್ಲದ ಮನುಷ್ಯ. ಇದಂತೂ ಪ್ರತಿ ಮಾನವನೂ ಆತ್ಮಶೋಧ ಮಾಡಿಕೊಳ್ಳಬೇಕೆಂಬುದಕ್ಕೆ ಆಧಾರಭೂತವಾದ ವಚನ.

ಬಸವಣ್ಣನವರ ವಿನಯ ಲೋಕವಿದಿತವಾದ್ದು; ಒಮ್ಮೆ ಶರಣನೊಬ್ಬ 'ಲಿಂಗಪೂಜೆಯಿರಲು ಮತ್ತೆ ಜಂಗಮಸೇವೆ'ಯನ್ನೇಕೆ ಮಾಡಬೇಕು? ಎಂದು ಪ್ರಶ್ನಿಸಿದಾಗ, ಈ ವಚನವನ್ನು ನುಡಿಯುತ್ತಾರೆ:

"ಲಿಂಗವಪೂಜಿಸಿದ ಬಳಿಕ ಜಂಗಮಕ್ಕಂಜಲೇಬೇಕು.
ದಕ್ಕನೆ ನುಂಗಿದಂತೆ ಬೆರೆತುಕೊಂಡಿರಬೇಡ.
ಬೀಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದರೆ
ಬೇಡಿದ ಪದವನೀವ ನಮ್ಮ ಕೂಡಲಸಂಗಮದೇವ."

ಬಾಗಿ ನಡೆಯುವ ಆ ನಮ್ರತೆಯನ್ನು ಪ್ರಕೃತಿದತ್ತವಾದ ಗಿಡಮರಗಳಿಂದಲೂ ಕಲಿಯಬಹುದಾಗಿದೆ.

"ಎನಗಿಂತ ಕಿರಿಯರಿಲ್ಲ,
ಶಿವಭಕ್ತರಿಗಿಂತ ಹಿರಿಯರಿಲ್ಲ,
ಎನ್ನಮನಸಾಕ್ಷಿ, ನಿಮ್ಮ ಪಾದಸಾಕ್ಷಿ

ಎನಗಿದೇ ದಿಬ್ಯ (ವ್ಯ) ಕೂಡಲಸಂಗಮದೇವ."

ವಿನಯವೇ ಮೂರ್ತಿವೆತ್ತಂತಿರುವ ಅಣ್ಣನ ವಚನ ಮಾನವನ ಅಹಂಕಾರ ನಿರಸನಕ್ಕೆ ದಿವ್ಯೌಷಧದಂತಿದೆ.

ಮಾನವನಾಗಿ ಹುಟ್ಟಿದ ಮೇಲೆ ಮನಸ್ಸಿನ ಚಾಂಚಲ್ಯ ತಪ್ಪಿದ್ದಲ್ಲ ಎನ್ನುವುದನ್ನು ಈ ನುಡಿಯಿಂದ ಮಿಡಿದಿದ್ದಾರೆ:

"ಕೊಂಬೆಯ ಮೇಲಿನ ಮರ್ಕಟನಂತೆ
ಲಂಘಿಸುವುದೆನ್ನ ಮನವು.
ನಿಂದಲ್ಲಿ ನಿಲಲೀಯದೆನ್ನ ಮನವು.
ಹೊಂದಿದಲ್ಲಿ ಹೊಂದಲೀಯದೆನ್ನ ಮನವು.
ಕೂಡಲಸಂಗಮದೇವ ನಿಮ್ಮ ಚರಣಕಮಲದಲ್ಲಿ
ಭ್ರಮರನಾಗಿರಿಸು ನಿಮ್ಮ ಧರ್ಮ."

ಚಪಲತೆ ಸಹಜವಾಗಿರುವ ಕಪಿಯ ಸಮಾನ ಮನಸ್ಸು; ಅದು ಪರಮಾತ್ಮನ ಕರುಣೆಯಿಂದ ಮಾತ್ರ ಸ್ಥಿರವಾಗಿರಲು ಸಾಧ್ಯ ಎಂಬ ವಿಷಯ ಸ್ಪಷ್ಟಪಡುತ್ತದೆ. ಪ್ರಾಯಃ 'ಮನವೆಂಬ ಮರ್ಕಟನ ತಡೆಯಲಾರೆನು ದೇವ' ಎಂಬ ಸರ್ಪಭೂಷಣರ ಕೃತಿಗೆ ಈ ವಚನ ಸ್ಫೂರ್ತಿ ಯತ್ತಿರಬೇಕೆಂದು ತೋರುತ್ತದೆ.

ಬಸವಣ್ಣನವರು ಪ್ರತಿಭಟಿಸಿದ ವಿಷಯಗಳಲ್ಲಿ ಯಜ್ಞ ಯಾಗಾದಿಗಳೂ ಸೇರಿವೆ. ಕೆಲವು ಸಂದರ್ಭಗಳಲ್ಲಿ ಯಾಗ ಮಾಡುವವರು ಹೋಮದ ನೆವದಿಂದ ಹೋತಗಳನ್ನು ಕೊಂದು ಕೃತಾರ್ಥರಾದೆವೆಂದು ಭಾವಿಸುತ್ತಿದ್ದರು. ಒಂದು ಸಲ ಯಜ್ಞಾಹುತಿಗಾಗಿ ಕೊಂಡೊಯ್ಯುತ್ತಿದ್ದ ಹೋತವು ಅರಚುತ್ತಿದ್ದುದನ್ನು ಕಂಡ ಅಣ್ಣನವರು ಇಂತೆಂದರು:

''ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು
ಎಲೆ ಹೋತೇ ಅಳು ಕಂಡೆಯಾ?
ವೇದವನೋದಿದವರ ಮುಂದೆ ಅಳು ಕಂಡೆಯಾ!
ಶಾಸ್ತ್ರವನೋದಿದವರ ಮುಂದೆ ಅಳು ಕಂಡೆಯಾ!
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ.''

ಇದು, ಹೋತಕ್ಕೆ ಹೇಳುವ ನೆಪದಲ್ಲಿ ಅದನ್ನು ವಧಿಸಿ ಪುಣ್ಯಪಡೆಯಬೇಕೆನ್ನುವವರಿಗೆ ಅಣ್ಣನ ಬುದ್ಧಿವಾದ.

ಒಮ್ಮೆ ಅಣ್ಣನ ಮನೆಯ ಹಸು ಕಳವಾಯಿತಂತೆ; ಆಗ ಗೋವಳರು ಮೊದಲುಗೊಂಡು ಮಹಾಮನೆಯ ಸೇವಕರೆಲ್ಲ ಅದಕ್ಕಾಗಿ ಹುಡುಕಿದ್ದೇ ಹುಡುಕಿದ್ದು. ಕೊನೆಗೆ ಒಡೆಯರಿಗೆ ಸುದ್ದಿ ತಿಳಿದಾಗ ಅವರೆಂದರು:

"ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂಭೋ ನಿಮ್ಮ ಧರ್ಮ!
ಬೊಬ್ಬಿಡಿದಿರಿಂಭೋ ನಿಮ್ಮ ಧರ್ಮ!
ಆರಡಿದಿರಿಂಭೋ ನಿಮ್ಮ ಧರ್ಮ!
ಅಲ್ಲಿ ಉಂಬರೆಯು ಸಂಗ; ಇಲ್ಲಿ ಉಂಬರೆಯು ಸಂಗ.
ಕೂಡಲಸಂಗಮದೇವ ಏಕೋಭಾವ.''

‘ಕುಲ’ದ ಬಗೆಗೆ ಬಹಳ ಏರುಪೇರುಗಳಿದ್ದ ಕಾಲವದು; ಅದನ್ನು ತೀವ್ರವಾಗಿ ವಿರೋಧಿಸಿದ ಬಸವಣ್ಣನವರು ತಮ್ಮ ಹುಟ್ಟಿನ ಬಗೆಗೇ ಅಭಿಮಾನ ತಾಳದಿರುವುದನ್ನು ಈ ವಚನದಲ್ಲಿ ಕಾಣುತ್ತೇವೆ: “ಉತ್ತಮಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಪೊರಿಸದಿರಯ್ಯ. ಕಕ್ಕಯ್ಯನೊಕ್ಕುದ ನಿಕ್ಕ ನೋಡಯ್ಯ. ದಾಸಯ್ಯ ಶಿವದಾನವ ನೆರೆಯ ನೋಡಯ್ಯ. ಮನ್ನಣೆಯ ಚನ್ನಯ್ಯನೆನ್ನುವ ಮನ್ನಿಸ. ಉನ್ನತ ಮಹಿಮ ಕೂಡಲಸಂಗಮದೇವ, ಶಿವಧೋ, ಶಿವಧೋ!”–ಶ್ರೇಷ್ಠ ಶಿವಶರಣರ ಅನುಗ್ರಹ ಸಂಪಾದನೆ ತಾನು ಉತ್ತಮ ಕುಲಜಾತನೆಂಬುದನ್ನು ಮರೆತರೇನೇ– ಎಂಬುದು ಇದರಿಂದ ವಿದಿತವಾಗುತ್ತದೆ.

ಪರಮಾತ್ಮನ ಪಾದ ಸೇರಬೇಕಾದರೆ ಸಂನ್ಯಾಸಿ ಆಗಬೇಕೆಂದೇನೂ ಇಲ್ಲ. ಗಾರ್ಹಸ್ಥ್ಯ ಧರ್ಮದಲ್ಲಿಯೇ ಗಂತವ್ಯ ಗುರಿಯನ್ನು ಸುಸೂತ್ರವಾಗಿ ಸಾಧಿಸಬಹುದು- ಎಂಬುದನ್ನು ಈ ರೀತಿ ಹೇಳಿದ್ದಾರೆ: “ಇಂದ್ರಿಯ ನಿಗ್ರಹವ ಮಾಡಿದರೆ ಪೊಂದುವುವು ದೋಷಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು ಸತಿಪತಿ ರತಿಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು? ಸತಿಪತಿ ರತಿಸುಖ ಭೋಗೋಪಭೋಗ ವಿಳಾಸವ ಬಿಟ್ಟರೇ ಸಿಂಧು ಬಲ್ಲಾಳರು? ನಿಮ್ಮ ಮುಟ್ಟಿ ಪರಧನ ಪರಸ್ತ್ರೀಗಳುಪಿದರೆ ನಿಮ್ಮ ಚರಣಕ್ಕೆ ದೂರ ಕೂಡಲಸಂಗಮದೇವ.”

ಇದರಿಂದ ಗೃಹಸ್ಥಾಶ್ರಮ ಕೀಳಾದುದಲ್ಲವೆಂದೂ, ಆದರೆ ಸ್ವಸ್ತ್ರೀ–ಸ್ವಾರ್ಜಿತಧನಬಿಟ್ಟು ಬೇರೆ ಬಯಸಬಾರದೆಂದೂ ಸ್ವಯಂ ಗೃಹಸ್ಥಾಶ್ರಮಿಗಳಾಗಿ ಕಾಯಕೋಪಜೀವಿಯಾಗಿದ್ದ ಅಣ್ಣನವರು ಮನಗಂಡು, ಅಂತೇ ಬಾಳಿದರೆಂದು ತಿಳಿದು ಬರುತ್ತದೆ.

ಒಟ್ಟಿನಲ್ಲಿ ಬಸವಣ್ಣನವರ ಬದುಕು ಮಾನವಪ್ರೇಮ, ದಯಾಧರ್ಮವಾದ–ಸತ್ಯ ಶುದ್ಧಕಾಯಕಾಚರಣೆ–ನುಡಿ ನಡೆಗಳೊಂದಾಗಿ ಜೀವಿಸುವಿಕೆ – ಅಸ್ಪೃಶ್ಯತಾ ನಿವಾರಣೆ ಸ್ತ್ರೀ ಸ್ವಾತಂತ್ರ್ಯ............ಮುಂತಾದ ಸದ್ಗುಣಗಳ ಖನಿಯಾಗಿದ್ದಿತು. ಈ ವಿಷಯದಲ್ಲಿ ಆವರ ನೂರಾರು ವಚನಗಳನ್ನು ಉದಹರಿಸಬಹುದಾಗಿದೆ. ಮೇಲೆ ಆಯ್ದಿರುವ ಕೆಲವೇ ವಚನಗಳು ‘ಸ್ಥಾಲೀಪುಲಾಕನ್ಯಾಯ’ದಂತೆ ಅಣ್ಣನವರ ಜೀವನದ ತೆರೆಗಳನ್ನೊಳಗೊಂಡ ನುಡಿಗಡಣದ ಪ್ರತೀಕವೆನಿಸಿವೆ. ಇಂತಹ ನಿರ್ಮಲವಾದ–ಸರ್ವತೋಮುಖವಾದ ಜಗದಣ್ಣನ ಬಾಳ್ವೆಯೇ ನಮ್ಮ ಇಂದಿನ ಜಗತ್ತಿಗೆ ಬೆಳಕಾಗಿ ಮುನ್ನಡೆಸಲಿ.

ಆಧಾರ ಗ್ರಂಥಗಳು–


1. ಅಣ್ಣನ ಬದುಕು (ಶ್ರೀ ಜ. ಚ. ನಿ.)

2. ಭಕ್ತಿಭಾಂಡಾರಿ ಬಸವಣ್ಣನವರು
(ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ)

3. ಕನ್ನಡ ಸಾಹಿತ್ಯ ಚರಿತ್ರೆ
(ಶ್ರೀ ರಂ. ಶ್ರೀ. ಮುಗಳಿ)




# ಉತ್ತರ ಹರಿಶ್ಚಂದ್ರ ಚರಿತ್ರೆ

ಎಂ. ನಂಜುಂಡಯ್ಯ

(ಮುಂದುವರಿದ ಭಾಗ)

ಕೂಡಿದ್ದ ಸಭೆಯು ದೇವತಾ ಸಮೂಹವೆಲ್ಲವೂ ಈ ನೆವದಿಂದಲಾದರೂ ಹರಿಶ್ಚಂದ್ರನ ಸತ್ಯಸಂಧತೆಯನ್ನು ನೋಡಬಹುದು ಎಂದು ಹಾರೈಸುತ್ತಾ ತಮ್ಮ ತಮ್ಮ ಮನೆಗಳನ್ನು ಸೇರಿದರು. ವಸಿಷ್ಠನು "ಭಲಾ! ವಿಶ್ವಾಮಿತ್ರ, ಇನ್ನಾವ ಕೇಡಿನ ಮಾತನ್ನೂ ಹೇಳದೆ ಹರಿಶ್ಚಂದ್ರನನ್ನು ಹರಿಹಯನರ್ಧಾಸನದೊಳಿಡುವೆನೆಂದೈ ನಿನ್ನ ಪ್ರತಿಜ್ಞೆಯು ಮೆಚ್ಚತಕ್ಕದ್ದೆ" ಸರಿಯೆಂದು ಪರಿಹಾಸ್ಯ ಮಾಡಿ ಮೆಲ್ಲನೆ ಭೂಲೋಕಕ್ಕೆ ಬಂದನು. ವಿಶ್ವಾಮಿತ್ರನು ಜಂಬದಿಂದ ತ್ರೈಶಂಕುವನ್ನು ಸುಳ್ಳುಹೇಳುವಂತೆ ಮಾಡುವ ಯುಕ್ತಿಯನ್ನು ಯೋಚಿಸುತ್ತಾ ತನ್ನಾಶ್ರಮವನ್ನು ಕುರಿತು ಹೊರಟನು.

ಆ ವೇಳೆಯಲ್ಲಿ ಭೂಲೋಕದಲ್ಲಿ ಹರಿಶ್ಚಂದ್ರಭೂಪಾಲನು ಸದಾ ಯಾಗದ ಬಯಕೆಯಿಂದ ಒಂದು ಯಾಗವನ್ನು ಮಾಡಿ ಬ್ರಹ್ಮಸಮಾನರಾದ ಬ್ರಾಹ್ಮಣ ಸಮುದಾಯಕ್ಕೆ ಸಾಕಾವಷ್ಟು ದಾನವನ್ನು ಮಾಡುತ್ತಿದ್ದನು. ಆದನ್ನು ತಿಳಿದು ವಿಶ್ವಾಮಿತ್ರನು ಅಯೋಧ್ಯೆಗೆ ಬಂದು ಮಹೀಪತಿಯನ್ನು ನೋಡಿ ಅವನಿಂದ ತಕ್ಕ ಮನ್ನಣೆಯನ್ನು ಪಡೆದು "ರಾಜೇಂದ್ರ, ಎಲ್ಲಾ ರಾಜರಲ್ಲಿಯೂ ಮಹಾ ಉದಾರಿಯಾದ ಪುಣ್ಯಶಾಲಿಯಾದ ನಿನ್ನನ್ನು ಕಲ್ಪವೃಕ್ಷವನ್ನು ಕಂಡು ಮಾಗಿದ ಹಣ್ಣನ್ನು ಇಚ್ಛಿಸುವ ಹುಚ್ಚನಂತೆ ಅಲ್ಪಫಲವೊಂದನ್ನು ಕೇಳಲು ಬಂದಿದ್ದೇನೆ. ಅದಾವುದೆಂದರೆ ಬಹುಕಾಲದಿಂದಲೂ ಯೋಚಿಸುತ್ತಿರುವ ಯಜ್ಞ ಒಂದಿದೆ. ಅದರಿಂದ ಆ ಸರ್ವ ಭೂಷಣನು ಹೆಚ್ಚಿನ ಪ್ರೀತನಾಗುವನು. ಆದರೆ ಅದಕ್ಕೆ ಆನೆಯ ಮೇಲೆ ನಿಂತು ಒಬ್ಬ ಮನುಷ್ಯನು ನಿಗುರಿನಿಂತು ಮೇಲ್ಕೆಸೆದ ರತ್ನದವರೆಗೆ ವ ರ ಹ ಗ ಳ ರಾಶಿ ಬೇಕಾಗಿರುತ್ತದೆ. ನಿನ್ನಿಂದಲ್ಲದೆ ಬೇರೆಯವರಿಂದ ಇದು ನನಗೆ ದೊರೆಯುವುದಿಲ್ಲವೆಂದು ತಿಳಿದು ಆಸೆಯಿಂದ ಬಂದು ನಿನ್ನನ್ನು ಯಾಚಿಸುವೆನು. ನನ್ನನ್ನು ಯಜ್ಞಪೂರ್ಣನನ್ನಾಗಿ ಮಾಡುವೆಯೊ ಅಪೂರ್ಣನನ್ನಾಗಿ ಮಾಡುವೆಯೊ ಎಂದು ಕೈನೀಡಿ ನಿಂತಿರುವ ಯತಿಯನ್ನು ನೋಡಿ ಹರಿಶ್ಚಂದ್ರನು ಹೀಗೆ ಹೇಳಿದನು–

"ಯತಿಶ್ರೇಷ್ಠರೇ, ಬ್ರಹ್ಮಜ್ಞಾನಿಗಳೇ, ಮಹಾಪುಣ್ಯಭಾಗಿಗಳಾದ ನಿಮ್ಮ ಬರುವಿಕೆಯಿಂದ ನನ್ನ ಯಾಗವು ಸಾರ್ಥಕವಾಯಿತು. ಧನ್ಯನಾದೆನು. ನನ್ನಮನೆಯು ಪಾವನವಾಯಿತು. ಈ ವೇಳೆಯಲ್ಲಿ ನಿಮ್ಮಂತಹ ಯತೀಶ್ವರರಿಗೆ ಕೊಡತಕ್ಕದ್ದು ಸ್ತೋತ್ರಾರ್ಹವಾದುದಲ್ಲವೆ? ಅಪೇಕ್ಷಿಸಿದ ದ್ರವ್ಯವನ್ನು ಮನಸಾರೆ ಸ್ವೀಕರಿಸುವುದು" ಎಂದು ಭಂಡಾರವನ್ನೆ ತನ್ನ ವಶ ಮಾಡಲು ಆ ಋಷಿಶ್ರೇಷ್ಠನು "ಆ ಗ ಬ ಹು ದ ಯ್ಯ ಕೊಡತಕ್ಕವನೆನ್ನುವುದಕ್ಕೂ ಭೂಲೋಕದ ಕಣ್ಣು ಎನ್ನುವುದಕ್ಕೂ ನೀನಲ್ಲದೆ ಈ ಭೂಮಂಡಲನಲ್ಲಿ ಬೇರೊಬ್ಬನಿರುವನೇ?" ಎಂದು ಹೊಗಳಿ ತಕ್ಷಣವೇ ಎದ್ದು ಆ ಯಾಗವನ್ನು ನಡೆಸುವ ದಿನ್ನೂ ಸಾವಕಾಶವಾಗಿರುವುದು. ಸಮಯ ಬಿದ್ದೊಡನೆಯೆ ಬಂದು ನಾನು ಆ ದ್ರವ್ಯವನ್ನು ತೆಗೆದುಕೊಂಡು ಹೋಗುವೆನು. ಅದುವರೆಗೂ ನಿನ್ನ ಬೊಕ್ಕಸದಲ್ಲಿಯೇ ಇರಲಿ. ನಿನಗೆ ದೀರ್ಘಾಯುರಾರೋಗ್ಯ ಉಂಟಾಗಲಿ.

ನಾನು ಹೋಗಿಬರುತ್ತೇನೆ–ಎಂದು ಹೇಳಿ ತನ್ನ ಇಷ್ಟದಂತೆ ಹೊರಟು ಹೋದನು. ಹರಿಶ್ಚಂದ್ರನು "ಈ ಋಷಿಯು ಉದಾಶೀನನು. ತಾನು ಕೇಳಿದ ಹಣವನ್ನು ತೆಗೆದು ಕೊಂಡು ಹೋಗದೆ ನನಗೆ ಸಾಲವನ್ನು ಹೊರಿಸಿ ಹೋದನು" ಎಂದುಕೊಂಡು ಏನನ್ನೂ ಹೇಳಲಾರದೆ ಕಳುಹಿಸಿಕೊಟ್ಟು ಎಚ್ಚರದಿಂದ ನಡೆಯುತ್ತಿದ್ದನು.

ವಿಶ್ವಾಮಿತ್ರನು ತನ್ನಾಶ್ರಮಕ್ಕೆ ಹೋಗಿ ದೊರೆಯನ್ನು ಅಸತ್ಯನೆನಿಸುವ ಉಪಾಯವನ್ನು ಯೋಚಿಸಿ ಲೆಕ್ಕವಿಲ್ಲದಷ್ಟು ಮೃಗಗಳನ್ನೂ ವೇಗವುಳ್ಳ ಪ್ರಾಣಿಗಳನ್ನೂ ಸೃಷ್ಟಿಸಿ ಹರಿಶ್ಚಂದ್ರನು ಪರಿಪಾಲನೆ ಮಾಡುತ್ತಿದ್ದ ದೇಶವನ್ನು ಪೀಡಿಸಲು ಕಳುಹಿಸಿದನು. ಆ ಭಯಾನಕ ಪ್ರಾಣಿಗಳು ಕೊಬ್ಬಿನಿಂದ ಉಬ್ಬಿ ಎಲ್ಲಿ ಬೇಕಾದರಲ್ಲಿ ತಿರುಗುತ್ತ ತಿರುಗುತ್ತ ದೇಶಗಳನ್ನು ನುಗ್ಗಿ, ಹೊಲ, ನೆಲ ಬೇಲಿ, ಮರ, ಗಿಡ, ನೀರು, ಪೈರು, ದನಕರು, ಕುರಿ ಮರಿ ಮೊದಲಾದ ಸಮಸ್ತ ವಸ್ತುಗಳನ್ನೂ ನಾಶಗೊಳಿಸಲು ಪ್ರಯತ್ನಿಸಿದುವು. ಅದರಿಂದ ತೊಂದರೆಗೊಂಡ ಪ್ರಜೆಗಳೆಲ್ಲರೂ ಭಯಗೊಂಡು ಹರಿಶ್ಚಂದ್ರ ಭೂಪಾಲನನ್ನು ಸಂದರ್ಶಿಸಿ ಕರಗಳನ್ನು ಜೋಡಿಸಿ "ಪ್ರಭುವೇ ನಿಮ್ಮ ಕೃಪೆಯಿಂದ ರಾಜ್ಯದ ಪ್ರಜೆಗಳು ಉತ್ತಮ ಬೆಳೆಯಿಂದ ಅನ್ನ ವಸ್ತ್ರಕ್ಕೆ ಕೊರತೆಯಿಲ್ಲದೆ ಇದುವರೆವಿಗೂ ಯಾವ ತೊಂದರೆಯೂ ಇಲ್ಲದೆ ಸುಖದಿಂದಿದ್ದೆವು. ಹೀಗಿರುವಾಗ ಅದಾವ ಕರ್ಮವೋ ತಿಳಿಯದು. ಲೆಕ್ಕವಿಲ್ಲದ ವೇಗವುಳ್ಳ ಕ್ರೂರ ಪ್ರಾಣಿಗಳನ್ನು ಈ ಪೊಡವಿಯು ಹಡೆದುದೋ ಎನ್ನುವಂತೆ ಎಲ್ಲೆಡೆಯೂ ತುಂಬಿಕೊಂಡು ಊರುಗಳಿಗೆ ನುಗ್ಗಿ ಮನೆ, ಮಠ ಮುಂತಾದುವುಗಳಲ್ಲಿಯೂ ಹಗಲಿರುಳೂ ಜನಗಳನ್ನು ಕೊಂದು ತೊಂದರೆಗೊಳಿಸುತ್ತಿರುವುವು. ಈ ಕಾಡು ಮೃಗದ ಬಾಧೆಯನ್ನು ಹರಿಸಿ ನಮ್ಮನ್ನು ಕಾಪಾಡಲು ದಯಮಾಡಿಸಬೇಕೆಂದು ಬೇಡಿಕೊಂಡರು. ರಾಜೇಂದ್ರನು ಪ್ರಜೆಗಳ ಪ್ರಾರ್ಥನೆಯನ್ನು ಮನ್ನಿಸಿ "ಚಿಂತಿಸಬೇಡಿ, ನಾಳೆ ಆ ಮೃಗ ಸಮೂಹವನ್ನು ಸೀಳಿ ನಿಮ್ಮ ತೊಂದರೆಯನ್ನು ನಿವಾರಣೆ ಮಾಡುತ್ತೇನೆ" ಎಂದು ಕಳುಹಿಸಿ ಮರುದಿನ ಸಕಾಲಕ್ಕೆ ಎದ್ದು ನಿತ್ಯಕರ್ಮಗಳನ್ನು ಮುಗಿಸಿಕೊಂಡು ಬೇಟೆಯಲ್ಲಿ ಪ್ರೀತಿಯುಳ್ಳ ಬೇಟೆಗಾರರೊಡಗೂಡಿ ಹೆಂಡತಿ, ಮಗ, ಮಂತ್ರಿಯ ಸಹಿತ ವಾಯುವೇಗ ಮನೋವೇಗದ ಕುದುರೆಗಳನ್ನು ಕಟ್ಟಿದ್ದ ರಥಗಳನ್ನು ಹತ್ತಿ ಉತ್ತರ ದೇಶಾಭಿಮುಖನಾಗಿ ಹೊರಟು ಇದಿರಾಗಿ ಬಂದ ಮೃಗಗಳನ್ನು ಸಂಹರಿಸುತ್ತ ನಾನಾ ವೃಕ್ಷಜಾತಿಗಳಿಂದ ಕೂಡಿದ ಕಾಂತಾರವನ್ನು ಹೊಕ್ಕು ಭಯಂಕರ ಮೃಗಜಾತಿಗಳನ್ನು ಕೊಂದು ನಾನಾಬಗೆಯ ಬೇಟೆಯನ್ನಾಡಿ ಕಾಡಿಗೆ ಬಂದು ದಾರಿಯನ್ನು ಹುಡುಕುತ್ತಿರಲು ದೈವವಶದಿಂದ ವಸಿಷ್ಠರ ಆಶ್ರಮವನ್ನು ಸೇರಿ ಅವರ ಹಿತೋಪದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ಅಲ್ಲಿಂದ ಹೊರಟು ಕೃತ್ರಿಮ ಕೆಲಸದ ಕುಶಲನಾದ ಕೌಶಿಕನಿಂದ ಸೃಷ್ಟಿಸಲ್ಪಟ್ಟ ಬಂಗಾರದ ಬಣ್ಣದ ಜಿಂಕೆಯೊಂದನ್ನು ನೋಡಿ ಅದರ ಸುಕುಮಾರತೆಗೂ ಸೌಂದರ್ಯಕ್ಕೂ ಮನಸೋತು ಕೊಲ್ಲಲು ಮನಸ್ಸು ಬಾರದೆ ಆಯಾಸಗೊಳಿಸಿ ಅದನ್ನು ತನ್ನ ರಾಜಧಾನಿಗೆ ತೆಗೆದೊಯ್ಯುವ ಪ್ರಯತ್ನದಿಂದ ಹಿಂದೆ ಹೋಗಲು ಅದು ಆ ಕಡೆ ಈತಡೆ ಓಡಿ ಕೈಗೆ ಸಿಕ್ಕದೆ ಸಿಕ್ಕಿ ಸಿಕ್ಕಿದಂತೆ ಆಯಾಸಗೊಂಡು ನಿಂತು ಆಸೆಯನ್ನು ಹುಟ್ಟಿಸುತ್ತ ಮೋಸಪಡಿಸಿ ವಿಶ್ವಾಮಿತ್ರ ಋಷಿಯ ಆಶ್ರಮಕ್ಕೆ ಹೋಗಿ ಕಾಣದಂತಾಯಿತು.

ಆಗ ಆ ಹರಿಶ್ಚಂದ್ರನು ಆಯಾಸಗೊಂಡು ಅದು ಹೋದ ದಿಕ್ಕನ್ನು ಕಾಣದೆ ನಾಚಿಕೊಂಡವನಾಗಿ ಮನದಲ್ಲಿ ಹಠವನ್ನು ಮಾಡಿಕೊಂಡು ಅದು ಹೋದ ಮಾರ್ಗವನ್ನು ಹೆಜ್ಜೆ ಗುರುತಿನಿಂದ ಹಿಡಿದು ಹುಡುಕುತ್ತ ಹೋಗಿ ಬಹುದೂರದಲ್ಲಿ ಒಂದು ಪುಣ್ಯಾಶ್ರಮವನ್ನು ಕಂಡು ಅಲ್ಲಿ ಮಾರ್ಗಾಯಾಸವನ್ನು ಕಳೆದ ಸ್ವಲ್ಪ ವಿಶ್ರಾಂತಿ ಪಡೆಯಲು ಯೋಚಿಸಿ ಅದರ ಸಮೀಪದಲ್ಲಿ ಮಗನನ್ನೂ ಹೆಂಡತಿಯನ್ನೂ ರಥದಿಂದಿಳಿಸಿ ತಾನೂ ಇಳಿದು ಈ ಮೊದಲೆ ಕುದುರೆಯಿಂದಿಳಿದು ಕೈ ಕುಲುಕುವ ಬೇಟೆಗಾರರಿಗೆ ಆ ಆಶ್ರಮದ ಸೊಗಸನ್ನು ಹೇಳಿ ಸಂತೋಷಪಡುತ್ತ ಅದರ ಒಳಹೊಕ್ಕು ಅದರ ನಡುವೆ ಕಂಗೊಳಿಸುತ್ತಿದ್ದ ಕೊಳದಲ್ಲಿ ಸ್ನಾನಮಾಡಿ ನೀರನ್ನು ಕುಡಿದು ಅದರ ತೀರದಲ್ಲಿದ್ದ ಮೊಲ್ಲೆಯ ಬಳ್ಳಿಯ ಚಪ್ಪರದಲ್ಲಿ ಕಾಣುತ್ತಿದ್ದ ಚಂದ್ರಕಾಂತ ಶಿಲೆಯ ಜಗುಲಿಯಲ್ಲಿ ಚಂದ್ರಮತಿಯ ತೊಡೆಗಳೇ ದಿಂಬಾಗಿರಲು ಮಲಗಿ ನಿದ್ದೆ ಮಾಡುತ್ತಿರಲು–ತಾನು ಮಂಗಳ ಸಿಂಹಾಸನಾರೂಢನಾಗಿ ಒಡ್ಡೋಲಗಂಗೊಟ್ಟು ಇರುತ್ತಿರಲು

ಮಹಾ ಕೋಪಿಷ್ಠನಾದ ತಪಸ್ವಿಯು ಬಂದು ತನ್ನನ್ನು ಸಿಂಹಾಸನದಿಂದ ಕೆಳಕ್ಕೆ ತಳ್ಳಿ ತನ್ನ ಎಡಗಾಲನ್ನು ನೀಡಿ ನೆಗೆದು ಕಿರೀಟವನ್ನು ಒಡೆದಂತೆ ಕನಸ್ಸನ್ನು ಕಂಡು ಭಯಪಟ್ಟು ಎದ್ದು ಹಂಬಲಿಸಿಕೊಳ್ಳುತ್ತಿದ್ದನು. ಅದಕ್ಕೆ ಚಂದ್ರಮತಿಯು ದುಃಖಿಸಿ ಯೋಗ್ಯವಾದ ಮಾತುಗಳಿಂದ ಗಂಡನನ್ನು ಸಮಾಧಾನಗೊಳಿಸಿ ಹಂಬಲಿಕೆಯನ್ನು ಮರೆಯಿಸಿ ಆದರ ಕಾರಣವನ್ನು ತಿಳಿದು "ಇನ್ನು ಇಲ್ಲಿದ್ದಲ್ಲಿ ಕಷ್ಟವಾಗುವುದು; ಗಡಿ ಬಿಡಿಗೊಳ್ಳುವನು" ಎಂಬನಿತರಲ್ಲಿಯೇ ಕೌಶಿಕನಿಂದ ಪ್ರೇರಿತರಾದ ಇಬ್ಬರು ಹೊಲತಿಯರು ಬಂದು ಮನಕ್ಕೊಪ್ಪುವಂತೆ ಗಾನಮಾಡಿ ಆಟವಾಡಿ ದೊರೆಯ ಸಂಗಡ ಸರಸ ಸಲ್ಲಾಪಗಳನ್ನಾಡಲು ಮೊದಲು ಮಾಡಿದರು. ದೊರೆಯು ಮುಟ್ಟಿಕೊಳ್ಳಬಾರದ ಹುಡುಗಿಯರ ಕೆಟ್ಟ ಚೇಷ್ಟೆಗಳನ್ನು ಒಪ್ಪದೆ ಸಾಹಸಮಾಡಿ ಮೈ ಮುರಿಯುವಂತೆ ಹೊಡೆದಟ್ಟಿದನು. ಈ ವಿಷಯವನ್ನು ತಿಳಿದ ಗಾದಿಪುತ್ರನು-ಕಾಲಿನಿಂದ ತುಳಿದ ಸರ್ಪದಂತೆ ಕೋಪದಿಂದ ಉರಿದೆದ್ದು ಬುಸುಗುಟ್ಟುತ್ತ ಬಂದು ಆ ದೊರೆಯು ಮೊದಲೆ ಕನಸಿನಲ್ಲಿ ಕಂಡುದನ್ನು ಪ್ರತ್ಯಕ್ಷವಾಗಿ ಮಾಡಿದನು. ಅನಂತರ ಆ ನರೇಂದ್ರನು ಮರ್ಯಾದೆಯನ್ನು ಕಳೆದುಕೊಂಡು ಕೈಲಾಗದವನಂತೆ ಬಂದ ಅಪಘಾತಕ್ಕೆ ಭಯಪಟ್ಟು ಕೈಮುಗಿದು "ದಾಸನ ತಪ್ಪು ದಂಡದಿ ಸಲ್ಲುವುದು" ಎನ್ನುವಂತೆ ಆ ಋಷಿಯ ಕಾಲಿಗೆರಗಿ ಮೇಲೇಳದಿರಲು ಶಾಂತನಾದ ಆ ದೊರೆಯನ್ನು ಆ ಋಷಿಯು "ಬದುಕಬೇಕು ಎಂದರೆ ಚಲುವಕನ್ನಿಕೆಯರನ್ನು ಹೊಡೆದ ದೋಷಕ್ಕೆ ತಕ್ಕ ಪ್ರಾಯಶ್ಚಿತ್ತನಾಗಿ ಅವರನ್ನು ಕೈಹಿಡಿಯ ತಕ್ಕದ್ದು" ಎಂದು ಹೇಳಲು ಹರಿಶ್ಚಂದ್ರನು "ಹರಹರ! ಎಂತಹ ಮಾತನ್ನು ಕೇಳಿದೆನು?" ಎಂದು ಕಿವಿಗಳನ್ನು ಮುಚ್ಚಿ ವಿಶ್ವಾಮಿತ್ರನನ್ನು ನೋಡಿ "ಇಂತಹ ಕಠಿಣವಾದ ಮಾತುಗಳಿಂದ ಪೀಡಿಸುವುದಕ್ಕೆ ಬದಲಾಗಿ ನನ್ನ ಪ್ರಾಣವನ್ನು ತೆಗೆದುಬಿಡುವುದೇ ಒಳ್ಳೆಯದು! ಬೇಕೆಂದಲ್ಲಿ ನನ್ನ ಸಾಮ್ರಾಜ್ಯವನ್ನಾದರೂ ಬಿಟ್ಟುಬಿಡುವೆನಲ್ಲದೆ ಕುಲ ಶೀಲಗಳನ್ನು ಬಿಡಲಾರೆನು?" ಎಂದು ಹೇಳಿಕೊಂಡನು ಅವನ್ನೆ ಆಧಾರ ಮಾಡಿಕೊಂಡು ಮೋಸದ ಸನ್ಯಾಸಿಯು-'ಹರಿಶ್ಚಂದ್ರಾ, ನೀನು ಸೂರ್ಯಕುಲದಲ್ಲಿ ಹುಟ್ಟಿದವನು! ಹೇಳಿದ ಮಾತಿಗೆ ತಪ್ಪಬಾರದು ಮೃದು ನುಡಿಯನ್ನು ಗೆಲ್ಲತಕ್ಕ ಹೆಣ್ಣುಗಿಳಿಯ ನುಡಿಯಂತಿರುವ ಕುಮಾರಿಯನ್ನು ಲಗ್ನವಾಗುವುದಿಲ್ಲವೆಂದ ಮೇಲೆ ನಿನ್ನ ಸಾಮ್ರಾಜ್ಯವನ್ನು ಬಿಟ್ಟು ಬಿಡುತ್ತೇನೆಂದು ಹೇಳಿದೆ. ಹಾಗಾದಲ್ಲಿ ಈಗಲೆ ನಿನ್ನ ಸಾಮ್ರಾಜ್ಯವನ್ನು ಧಾರಾಪೂರ್ವಕವಾಗಿ ನನಗೊಪ್ಪಿಸು ಎನ್ನುತ್ತ ಒತ್ತಾಯ ಪಡಿಸಲು ಆತನು ಹಾಗೆಯೇ ಮಾಡಿ ಮಗ ಹೆಂಡತಿ ಸಹಿತವಾಗಿ ಅಯೋಧ್ಯೆಗೆ ಬಂದು ಆ ವರ್ತಮಾನವನ್ನು ಪುರಜನಕ್ಕೆ ತಿಳಿಸಲು "ಮರಿ ಹಾಕುವವರೆಗೂ ಕರುಣೆಯಿಂದ ಕಾಪಾಡಿ ಈ ಕಠಿಣಾತ್ಮನ ವಶಕ್ಕೆ ಕೊಟ್ಟು ಹೋಗುವುದೆ?" ಎಂದು ಹಂಬಲಿಸುತ್ತಿರಲು ಅವರನ್ನು ನಾನಾ ರೀತಿಯ ಹಿತವಚನಗಳಿಂದ ಸಂತೈಸಿ ತಾನು ಕಾಡಿಗೆ ಹೊರಟನು.

ಅನಂತರ ವಿಶ್ವಾಮಿತ್ರನು ಸೂರ್ಯವಂಶ ಶ್ರೇಷ್ಠನನ್ನು ಗರ್ಜಿಸಿ ಎಲೈ ನೀಚ ದೊರೆಯೆ, ನಿನ್ನ ದುರ್ನಡತೆಯನ್ನು ನಾನು ನೋಡಿದ್ದೇನೆ. ಮೊದಲು ಕೊಟ್ಟ ನನ್ನ ಹಣವೆಲ್ಲಿ? ಅದನ್ನು ಕೊಡದೆ ಎಲ್ಲಿಗೆ ಹೋಗುವೆ? ಇದು ಮಾತಿಗೆ ತಪ್ಪದ ರೀತಿಯಲ್ಲವೇನು? ಎಂದು ಹಲವು ತಿರಸ್ಕಾರದ ಮಾತುಗಳನ್ನಾಡಲು ಹರಿಶ್ಚಂದ್ರನು "ಋಷಿಶ್ರೇಷ್ಠರೇ, ನಿಮ್ಮ ಹಣವು ನನ್ನ ಭಂಡಾರದಲ್ಲಿಯೇ ಇರುವುದು ಬ್ರಹ್ಮಸ್ವತ್ತಾದ ನಿಮ್ಮ ದ್ರವ್ಯವನ್ನು ಮುಟ್ಟಲು ಸಹ ಯೋಚಿಸಿದವನಲ್ಲ. ನನ್ನ ಸರ್ವಸ್ವವನ್ನೂ ಕೊಟ್ಟ ಬಳಿಕ ನಿಮ್ಮ ಮೊದಲಿನ ಹಣ ಬೇರೆಯೊಂದಿರುವುದೇ?" ಎಂದು ವಿಜ್ಞಾಪಿಸಲು ಕುಶಿಕ ಪುತ್ರನು "ಕೆಟ್ಟ ದೊರೆಯೆ! ಸುಮ್ಮನೆ ಏತಕ್ಕೆ ಸುಳ್ಳನ್ನು ಹೇಳುವೆ? ರಾಜರುಗಳು ಯಾವಾಗಲೂ ನೀತಿ ಬಾಹಿರರಲ್ಲವೆ? ಮೊದಲು ಕೊಟ್ಟ ನನ್ನ ದ್ರವ್ಯವನ್ನು ಕೊಡದೆ ಹೋಗಲಾಗದು.' ಎಂದು ಹೇಳಲು ಆ ರಾಜಶ್ರೇಷ್ಠನು ಅದನ್ನು ಹೇಗಾದರೂ ಮಾಡಿ ಸಂಪಾದನೆ ಮಾಡಿ ಕೊಡುತ್ತೇನೆ ಎನ್ನಲು ನಿನ್ನನ್ನು ನಂಬುವವರಾರು? ಎಂದು ಹೇಳುತ್ತ, ತನ್ನಂತೆ ಮೋಸ ಕೆಲಸದಲ್ಲಿ ದಕ್ಷನಾದ ನಕ್ಷತ್ರನೆಂಬ ಒಬ್ಬ ನೆಚ್ಚಿನ ಶಿಷ್ಯನನ್ನು ಹಿಂದೆ ಕಳುಹಿ ಆ ಹಣದ ಸಲುವಾಗಿಯೇ ಹೆಂಡತಿ ಮಗನನ್ನು ಮಾರಿಸಿ ಹೊಲೆಯನಿಗೆ ಆಳನ್ನು ಮಾಡಿ

ತಕ್ಷಕನಿಂದ ಮಗನನ್ನು ಮರಣಗೊಳಿಸಿ ಚಂದ್ರಮತಿಯನ್ನು ಇಲ್ಲಸಲ್ಲದ ಹುಸೆಗೆ ಗುರಿಮಾಡಿ ಹರಿಶ್ಚಂದ್ರ ಭೂಪಾಲನನ್ನು ಸತ್ಯದಿಂದ ದೂರ ಮಾಡಲಾರದೆ ಆ ರಾಜೇಂದ್ರನ ಸತ್ಯ ಸಂಧತೆಗೆ ಮೆಚ್ಚಿ ಪ್ರತ್ಯಕ್ಷರಾದ ದೇವತಾ ಸಮೂಹ ಸೇವಿತರಾದ ಹರಿಹರವಿರಿಂಚಿಗಳಿಗೆ ತನ್ನ ಪಂಥದ ವಿಷಯವನ್ನು ಅರಿಕೆಮಾಡಿ ಮಹಾ ವಿಷ್ಣುವನ್ನು ಪ್ರಾರ್ಥಿಸಿಕೊಂಡು ಸುದರ್ಶನ ಚಕ್ರವನ್ನು ಹರಿಶ್ಚಂದ್ರನು ಹೇಳಿದುದನ್ನು ಮಾಡುವಂತೆ ಆಶೀರ್ವಾದಮಾಡಿ ಬಹು ಪ್ರೀತಿಯಿಂದ ಹರಿಶ್ಚಂದ್ರ ಮಹಾರಾಜನಿಗೆ ಹೀಗೆ ಹೇಳಿದನು:- "ಎಲೈ ಸತ್ಯಕ್ಕಾಗಿ ಹುಟ್ಟಿದ ಮಗನೇ, ಸತ್ಯಕ್ಕೆ ನೀನೆ ಆಧಾರನು. ನಿನ್ನ ಸತ್ಯ ಸಂಧತೆಯನ್ನು ನೋಡಲು ಇಚ್ಛಿಸಿ ಇಷ್ಟು ಮಾಡಿದೆನೆ ವಿನಾ ಬೇರೆಯಿಲ್ಲ. ನಾನು ಈ ಕೆಲಸಕ್ಕೆ ತೊಡಗುವಾಗಲೇ ನಿನ್ನನ್ನು ಸತ್ಯದೂರನನ್ನಾಗಿ ಮಾಡದೆ ಹೋದಲ್ಲಿ ಸಪ್ತ ದ್ವೀಪಗಳ ಮಧ್ಯೆ ಇರುವ ಭೂಭಾಗವೆಲ್ಲವನ್ನೂ ಒಂದೇ ಶ್ವೇತಚ್ಛತ್ರದ ನೆರಳಿಗೊಳಪಡಿಸಿ ನಿನ್ನಿಂದ ಕಾಪಾಡಲ್ಪಡುವಂತೆ ಮಾಡುವೆನೆಂದು ಪ್ರತಿಜ್ಞೆ ಮಾಡಿದ್ದೆನು. ಈಗ ಅದಕ್ಕೆ ಸರಿಯಾಗಿ ಮಹಿಮೆಯನ್ನೂ ನಿನ್ನಲ್ಲಿ ಶಾಶ್ವತಗೊಳಿಸುವೆನೆಂದು ಹೇಳಿ ತನ್ನ ತಪಃ ಫಲವೊಳಗರ್ಧವನ್ನು ಭೂನಾಥನಿಗೆ ಧಾರಾಪೂರ್ವಕವಾಗಿ ಅನುಗ್ರಹಿಸಿ ಇನ್ನು ಈ ಮಂಡಲಾಕಾರವಾದ-ಭೂಮಂಡಲವನ್ನು ಸಂತೋಷದಿಂದ ಸ್ವೀಕರಿಸಿ ಸುಖದಿಂದ ರಾಜ್ಯಭಾರವಾಡತಕ್ಕದೆಂದ್ದು ಹರಸಿ ತಾನು ಮೊದಲು ಅಯೋಧ್ಯೆಯ ರಾಜ್ಯಭಾರವನ್ನೆಸಗಲು ಅಪ್ಪಣೆ ಮಾಡಿದ್ದ ಸುಯಜ್ಞನಿಗೆ ಪತ್ರವನ್ನು ಬರೆದು ಹರಿಶ್ಚಂದ್ರ ಮಹಾರಾಜನ ಹಸ್ತಕ್ಕಿತ್ತು ಈ ಪತ್ರವನ್ನು ಸುಯಜ್ಞನವಶಕೊಟ್ಟು ಸುಯಜ್ಞನಿಂದ ಸಕಲ ಸಾಮ್ರಾಜ್ಯಾಧಿಕಾರವನ್ನೂ ಸ್ವೀಕರಿಸುವುದೆಂದು ಆಶೀರ್ವಚನ ಪೂರ್ವಕವಾಗಿ ಕಳುಹಿಸಿಕೊಡುತ್ತಾನೆ. ಆ ಧರಣೀಧವನು ಕೌಶಿಕನ ಆಶೀರ್ವಾದವನ್ನು ಪಡೆದು ಪುತ್ರ ಮಿತ್ರ ಕಳತ್ರಯುತನಾಗಿ ಅಯೋಧ್ಯೆಗೆ ಪ್ರಯಾಣ ಮಾಡಲು ಅನುವಾಗುವನು.

ಈ ಮಹಾ ಸಂತೋಷದ ಸಂಗತಿಯನ್ನರಿತ ಕಾಶೀರಾಜನು ಸಕಲ ರಾಜಮರ್ಯಾದೆಯೊಂದಿಗೆ ಬಂದು ಸಾರ್ವಭೌಮಾ, ನೀವು ಸಾಮಾನ್ಯರಂತೆ ಯಾವ ಪರಿವಾರ ಜನವೂ ಇಲ್ಲದಂತೆ ಪಾದಚಾರಿಗಳಾಗಿ ಪಯಣಗೊಳ್ಳುವುದು ಸರ್ವಥಾ ಆಗದು. ಈ ದಿನ ನನ್ನ ಪಟ್ಟಣದಲ್ಲಿ ನನ್ನ ಸತ್ಕಾರವನ್ನು ಸ್ವೀಕರಿಸಿ ಪಯಣಗೊಳ್ಳಬೇಕೆಂ"ದು ಸಂಪ್ರಾರ್ಥಿಸಿದ ಕಾಶಿರಾಜನ ಕೋರಿಕೆಯಂತೆ ಆದಿನವಲ್ಲಿದ್ದು ನಾಳೆಯ ದಿನ ಚತುರಂಗ ಬಲ ಸಮೇತನಾಗಿ ಕಾಶಿರಾಜನಿಂದ ಬೀಳ್ಕೊಂಡು ಹಲವು ದಿನಗಳಲ್ಲಿ ಕೋಸಲದೇಶವನ್ನು ತಲುಪಿದನು ಈ ವಿಚಾರವನ್ನು ಚರರಿಂದ ಕೇಳಿದ ಸತ್ಯಕೀರ್ತಿಮಂತ್ರಿಯು ಸತ್ಯ ಮತ್ತು ಯಶಸ್ಸಿಗೆ ಕಾರಣನಾದ ಸೂರ್ಯವಂಶೋತ್ಪನ್ನನಾದ ರಾಜನು ಪ್ರಭುವಾಗಿ ಮತ್ತೆ ದಯಮಾಡಿಸಲು ಅವರನ್ನು ಇದಿರುಗೊಳ್ಳಲು ಪಟ್ಟಣವನ್ನು ಮಹಾವೈಭವದಿಂದ ಅಲಂಕರಿಸಿದರು. ಸುಯಜ್ಞನು ಸತ್ಯಕೀರ್ತಿ ಮುಂತಾದ ಪ್ರಮುಖ ಮಂತ್ರಿ ಮಂಡಲವನ್ನು ಮುಂದಿಟ್ಟುಕೊಂಡು ಪಟ್ಟಣದ ಜನರೊಡಗೂಡಿ ಮಂಗಳವಾದದೊಡನೆ ಸತ್ಯಮೂರ್ತಿಯನ್ನು ಇದಿರುಗೊಂಡನು. ಸುಯಜ್ಞನನ್ನು ಕಂಡೊಡನೆಯೇ ರಥದಿಂದಿಳಿದು ನಮಸ್ಕರಿಸುವ ರಾಜನನ್ನು ಸತೀಸುತ ಸಮೇತನಾಗಿ ಎಲ್ಲರನ್ನೂ ಗೌರವಿಸಿ ಆಶೀರ್ವದಿಸಿದನು. ಭದ್ರಗಜವನ್ನೇರಿ ರಾಜಬೀದಿಯಿಂದ ಹಿಡಿದು ನಗರದ ಎಲ್ಲಾ ಭಾಗದಲ್ಲೂ ಉತ್ಸವಗೊಂಡು ಜಯಘೋಷದೊಂದಿಗೆ ಆಸ್ಥಾನ ಮಂಟಪವನ್ನು ಪ್ರವೇಶಿಸಿ ಮಂಗಳ ಸಿಂಹಾಸನವನ್ನು ಅಲಂಕರಿಸಿದನು ರಾಜಧಾನಿಯ ಅಧಿಕಾರ ವರ್ಗದವರೂ, ಶ್ರೀಮಂತರೂ, ಪುರಪ್ರಜೆಗಳೂ, ಬಂದು ನಮಸ್ಕರಿಸಿ ಕಾಣಿಕೆಯನ್ನು ಒಪ್ಪಿಸುತ್ತಿರಲು ಅವರವರ ಯೋಗ್ಯತಾನುಸಾರ ಬಹುಮಾನವನ್ನೂ ತಾಂಬೂಲವನ್ನೂ ಕೊಟ್ಟು ಕಳುಹಿಸಿದನು

ಅನಂತರ ಚಕ್ರವರ್ತಿಯು ಚತ್ರಿಯ ಕೃಪೆಯಿಂದ ಚಕ್ರವು ತನ್ನ ಕಾರ್ಯವನ್ನು ಮಾಡುತ್ತಿರಲು ಸಮಸ್ತ ಭೂಮಂಡಲದ ಆಡಳಿತವನ್ನು ಮಾಡತಕ್ಕವನಾಗಿ ಎಲ್ಲಾ ರಾಜರ ಕಿರೀಟಗಳಲ್ಲಿ ಕೆತ್ತಲ್ಪಟ್ಟ ರತ್ನಗಳ ಪ್ರಭೆಯಿಂದ ಬೆಳಗತಕ್ಕ ಪಾದದ್ವಯನಾಗಿ ಮೊದಲಿನಂತೆಯೇ ಪ್ರಜಾಪಾಲನೆಯನ್ನು ಮಾಡಲನುವಾದನು.

ಹೀಗಿರುತ್ತಿರುವ ಸಂತಸ ಸಮಯದಲ್ಲಿ ಒಂದು ದಿನ

ಪರಾಪರ ಬ್ರಹ್ಮನಾದ ವಸಿಷ್ಠ ಮಹರ್ಷಿಯು ಚಕ್ರವರ್ತಿಯನ್ನು ನೋಡಲು ಬಂದನು. ಆ ಮುನಿ ಪುಂಗವನನ್ನು ನೋಡಿ :ಆತುರದಿಂದ ಗಾದಿಯಿಂದಿಳಿದು ಅತಿಶಯವಾದ ಪ್ರೀತಿಯಿಂದ ಇದಿರುಗೊಂಡು ವಿಧಿವತ್ತಾಗಿ ಭಕ್ತಿಯಿಂದ ಪೂಜಿಸಿ ಉತ್ತಮೋತ್ತಮವಾದ ಪೀಠದಲ್ಲಿ ಕುಳ್ಳಿರಿಸಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ನಯ ಭಯದಿಂದ ಮೆಲ್ಲನೆ ಗುರುದೇವ, ಸೌಖ್ಯವೆ? ಎನಲು ಆ ಋಷಿಶ್ರೇಷ್ಠನು ಅರಳಿದ ಪ್ರಕಾಶಮಾನವಾದ ಮುಖ ಕಮಲ ಉಳ್ಳವನಾಗಿ ಆಶೀರ್ವಾದ ಮಾಡಿ ನಿನ್ನಂತಹ ಉತ್ತಮ ಶಿಷ್ಯನಿರುವಾಗ ನಮ್ಮ ಕುಶಲಕ್ಕೆ ಕಡಿಮೆಯೇನು? ಸತ್ಯಪರಿಪಾಲನೆಯಲ್ಲಿ ಸ್ಥಿ ರ ವಂ ತ ನೆ ನಿ ಸಿ ಕೊಂಡು ಕೀರ್ತಿಪಡೆದೆ ಜಗತ್ತಿಗೇ ಅರಿವಿರುವ ವಿಶ್ವಾಮಿತ್ರನನ್ನು ಮೆಚ್ಚಿಸಿದೆ ನನ್ನ ಪ್ರತಿಜ್ಞೆಯನ್ನು ಗೆಲಿಸಿದೆ. ಆದರಿಂದ ನನ್ನ ತಪವು ಸಾರ್ಥಕವಾಯಿತು–ಎಂದನು. ಈ ಮಾತನ್ನು ಭಕ್ತಿಯಿಂದ ಒಪ್ಪಿಕೊಂಡು ನೀವುಅಪ್ಪಣೆ ಮಾಡಿದಂತೆ ಕೌಶಿಕ ಮುನಿಯೇ ನನಗೆ ರಕ್ಷಕನಹುದು. ತಮ್ಮ ಕೃಪಾನುಜ್ಞೆಯಿಂದ ನಾನು ಸು ಖಿ ಯಾ ದೆ ನು ಎಂದು ಅರಿಕೆ ಮಾಡಿಕೊಂಡನು. ಅಷ್ಟರಲ್ಲಿ ಆತನ ಪತ್ನಿ ನಿದಾನವಾಗಿ ಚಂದ್ರಮತಿಯು ಬಂದು ಆ ಗುರುವಿನ ಪಾದಕ್ಕೆ ನಮಸ್ಕರಿಸಿ ಗಂಡನ ಹಿಂದೆ ಅಡಗಿ ನಿಂತುಕೊಂಡಳು. ನಂತರ ಅರುಂಧತೀ ಪತಿಯಾದ ವಸಿಷ್ಠನು ಆ ಚಂದ್ರಮತಿಯನ್ನು ಸುಯಜ್ಞನಿಗೆ ತೋರಿಸಿ ತಪಸ್ವಿಯೇ ಈ ಹೆಣ್ಣುಮಗಳ ;ಶಾ ಂ ತಿ ಸಂಪತ್ತು ಪಂಚಮಹಾಯಜ್ಞಪರಾಯಣರಾಗಿ ಶೋಭಿಸುವ ಧರ್ಮಪರರನ್ನು ಅಲುಗಾಡಿಸಿತ್ತು. ಈಕೆಯ ಪಾ ತಿ ವ್ರ ತ್ಯ ಮಹಿಮೆಯನ್ನು ಲೆಕ್ಕಿಸಲು ಚತುರ್ಮುಖ ಬ್ರಹ್ಮನಿಗೂ ಸಾಧ್ಯವಲ್ಲವು ಅದೇ ಅಲ್ಲವೆ ಈ ನರೇಂದ್ರನಿಗುಂಟಾಗಿದ್ದ ಕಷ್ಟಸಾಗರಕ್ಕೆ ಹಡಗಾಗಿದ್ದು ದಡವನ್ನು ಸೇರಿಸಿದ್ದು–ಎನಲು ಆ ವಿಶ್ವಾಮಿತ್ರ ಶಿಷ್ಯ ಸುಯಜ್ಞನು "ಈ ದಂಪತಿಗಳು ಇಂತಹ ಮಹಿಮರಾಗಿರುವುದಕ್ಕೆ ಕಾರಣವು ನಿಮ್ಮ ಪಾದಾಶ್ರಯವಲ್ಲವೇ? ನಿಮ್ಮ ಪಾದಸೇವಾ ಸೌರ್ಯನನ್ನು ಹೊಂದಿರುವ ಪ ವಿ ತ್ರ ಮನಸ್ಸುಳ್ಳವರಿಗೆ ಕೌಶಿಕನ ಮಾಯೆಯೆಂಬ ಕತ್ತಲು ಕಡೆಯಾಗುವುದು ಏನು ದೊಡ್ಡದಿರುವುದು? ಅದು ಹಾಗಿರಲಿ–

1. ಈ ಪತಿವ್ರತೆಯ ಮಂಗಳ ಕಂಠದಲ್ಲಿ ತೂಗಾಡುವ ಮಂಗಳ ಸೂತ್ರವು ತನ್ನ ಗಂಡನಿಗಲ್ಲದೆ ಉಳಿದವರಿಗೂ ಕಾಣದಿರುವುದಕ್ಕೆ ಕಾರಣವೇನು ?

2. ಸಾರ್ವಭೌಮನು ಕೈಹಿಡಿದ, ರಮಣಿಯನ್ನು ಬ್ರಾಹ್ಮಣ ಬ್ರುವನೆನಿಸಿಕೊಂಡ ಕಾಲಕೌಶಿಕನು ದಾಸಿಯಾಗಿ ಕೊಂಡುಕೊಂಡನೇಕೆ?

3. ರಾಜರನ್ನು ಕಂಡೊಡನೆ ಬಿಲಗಳನ್ನು ಹುಡುಕುವ ವಾಯುಭಕ್ಷಕನಾದ ತಕ್ಷಕನು ದಕ್ಷನಾಗಿ ದೊರೆಯ ಮಗನನ್ನು ಕಚ್ಚಿ ಕೊಂದದ್ದು ಹೇಗೆ?

ಎಂಬುದಾಗಿ ನನ್ನ ಮನಸ್ಸು ಸಂಶಯದಿಂದ ಕೂಡಿರುವುದು. ಆದ್ದರಿಂದ ನನ್ನ ಸಂಶಯಗಳನ್ನು ಪರಿಹರಿಸಲು ಬೇಡುತ್ತೇನೆ – ಎನ್ನಲು ಆತನು ಸುಯಜ್ಞನ ತಿಳಿವಳಿಕೆಗೆ ಮೆಚ್ಚಿ ಹೀಗೆ ಹೇಳುತ್ತಾನೆ–

ಈ ಭೂಮಂಡಲದಲ್ಲಿ ಮಹಾ ಸಂಪತ್ತಿನಿಂದ ಹೆಸರಾದ ಜ್ಯೋತಿಷ್ಮಂತನೆಂಬ ಒಬ್ಬರಾಜನಿದ್ದನು. ಅವನು ಪರಾಕ್ರಮಶಾಲಿಗಳಾದ ಶತ್ರುರಾಜರುಗಳಿಂದ ನಮಸ್ಕರಿಸಿಕೊಳ್ಳುವವನಾಗಿ ಪೂಜ್ಯನಾದ ದೇವೇಂದ್ರನಂತೆ ಸಂಪತ್ತಿನಿಂದ ಕಡಿದವನಾಗಿ ಬ ಹು ಕಾ ಲ ರಾಜ್ಯವಾಳುತ್ತ ಸಕಲ ಸಂಪತ್ತಿಗೂ ಕಾರಣವಾದ ಪುತ್ರಸಂಪತ್ತನು ಕಾಣದೆ ಜಗದೊಡೆಯನೂ ಸಕಲ ಇಷ್ಟಾರ್ಥವನು ಕೊಡತಕ್ಕವನೂ ಆಶ್ರಿತ ಜನ ರಕ್ಷಕನೂ ಆದ ನಾರಾಯಣನೇ ಎಂದು ಹೆಚ್ಚಿನ ಭಕ್ತಿಯಿಂದ ಬಹು ಕಾಲ ತಪಸ್ಸನ್ನು ಮಾಡಿ ಅದರ ಫಲವಾಗಿ ಉತ್ತಮ ಗುಣರನ್ನೆಯಾದ ಮಗಳನ್ನು ಪಡೆದನು.

ಸಶೇಷ

# ವಿಷ್ಣುಚಿತ್ತರ ಶತಕ ಸಾಹಿತ್ಯ

ಲೇಖಕಿ : **ಆರ್. ಅಂಬುಜಮ್ಮ,** ಎಂ.ಎ., ಬಿ.ಟಿ.,

ಭಾಗವತದ ದಶಮಸ್ಕಂಧದ ಸಾರಭೂತವಾದ ಗ್ರಂಥವು ಶ್ರೀ ವಿಷ್ಣುಚಿತ್ತರೆಂಬ ಆಳ್ವಾರರಿಂದ ರಚಿತವಾದುದು. ಶ್ರೀ ವಿಷ್ಣುಚಿತ್ತರು ವಿಪ್ರಕುಲೋದ್ಭವರು. ಇವರ ಮಾತಾಪಿತೃಗಳು ಶ್ರೀ ವಿಲ್ಲಿಪುತ್ತೂರ್ ನಗರದ ನಿವಾಸಿಗಳು ಮತ್ತು ಭಗವದ್ಭಕ್ತರು,

ಈ ಆಳ್ವಾರರು ತಮ್ಮ ಬಾಲ್ಯದಿಂದಲೂ ಶ್ರೀ ವಿಷ್ಣುವಿನಲ್ಲೇ ಮನಸ್ಸನ್ನು ನಾಟಿದ್ದವರಾದ ಕಾರಣ, ಇವರಿಗೆ ಶ್ರೀ ವಿಷ್ಣುಚಿತ್ತರೆಂಬ ಹೆಸರು ಕೊಡಲ್ಪಟ್ಟಿತೆಂದು ಹೇಳುವರು. ಪರಮಭಕ್ತರಾದ ಶ್ರೀ ವಿಷ್ಣುಚಿತ್ತರು ದೇವನ ಕೈಂಕರ್ಯಕ್ಕಾಗಿ ವಿವಿಧ ಪುಷ್ಪಗಳ ಗಿಡಗಳೊಡಗೂಡಿದ ನಂದವನ ಒಂದನ್ನು ರಚಿಸಿದರು ಮತ್ತು ಅವರ ನಗರದಲ್ಲಿದ್ದ ಶ್ರೀ ವಟಪತ್ರಶಾಯಿಯ ಮಂದಿರಕ್ಕೆ ಪ್ರತಿದಿನವೂ ತಪ್ಪದೆ. ಪುಷ್ಪಗಳನ್ನು ತೆಗೆದುಕೊಂಡುಹೋಗಿ ದೇವನನ್ನು ಅಲಂಕರಿಸುತ್ತಿದ್ದರು.

ಹೀಗಿರಲಾಗಿ, ಒಮ್ಮೆ ಪಾಂಡ್ಯರಾಜನಾದ ವಲ್ಲಭದೇವನು, ಪರತತ್ವದ ನಿರ್ಣಯಕ್ಕಾಗಿ ವಿದ್ವಾಂಸರ ಸಭೆಯೊಂದನ್ನು ಸೇರಿಸಿದನು ಮತ್ತು ಪರಬ್ರಹ್ಮ ಸ್ವರೂಪವನ್ನು ವೇದ ಪ್ರಮಾಣಗಳ ಮೂಲಕ ನಿರ್ಣಯ ಮಾಡಿ ತಿಳಿಸುವ ವಿದ್ವಾಂಸನಿಗೆ ಬಹುಮಾನವಾಗಿ ಕೊಡಲು ಅಪಾರವಾದ ಧನವನ್ನು ಮುಡುಪಾಗಿಟ್ಟನು. ಈ ವಿಚಾರವು ದೇಶದಲ್ಲೆಲ್ಲಾ ಹರಡಿತು ಮತ್ತು ವಿದ್ವಾಂಸರು ಪಾಂಡ್ಯರಾಜನ ಸಭೆಗೆ ತಂಡೋಪತಂಡವಾಗಿ ಬಂದು ಸೇರಿದರು. ಒಂದು ರಾತ್ರಿ ಶ್ರೀ ವಿಷ್ಣುಚಿತ್ತರ ಸ್ವಪ್ನದಲ್ಲಿ ಸ್ವಾಮಿಯು ಪ್ರತ್ಯಕ್ಷನಾಗಿ, ಅವರನ್ನು ಪಾಂಡ್ಯರಾಜನ ಸಭೆಗೆ ಹೋಗಿ ವಾದಿಸುವಂತೆ ಆಜ್ಞಾಪಿಸಿದನು. ಶ್ರೀ ವಿಷ್ಣುಚಿತ್ತರು ಭಗವಂತನ ಈ ಆಜ್ಞೆಯನ್ನು ಶಿರಸಾವಹಿಸಿ, ಪಾಂಡ್ಯರಾಜನ ವಿದ್ವತ್ ಸಭೆಗೆ ದಯಮಾಡಿಸಿದರು. ಅಲ್ಲಿ ರಾಜನು ಇವರನ್ನು ವಿಶೇಷವಾಗಿ ಗೌರವಿಸಿದನು. ಅಸೂಯಾಪರರಾದ ಕೆಲವು ವಿದ್ವಾಂಸರು ಶ್ರೀ ವಿಷ್ಣುಚಿತ್ತರನ್ನು ತಮ್ಮ ಗೋಷ್ಠಿಗೆ ಸೇರಿಸಲು ಒಪ್ಪಲಿಲ್ಲ. ಶ್ರೀ ವಿಷ್ಣುಚಿತ್ತರು ವೇದಾಧ್ಯಯನ ಮಾಡಿದ ವಿದ್ವಾಂಸರಲ್ಲವೆಂಬುದೇ ಅವರ ಆಕ್ಷೇಪದ ಮೂಲಕಾರಣವಾಗಿದ್ದಿತು. ಆದರೆ ರಾಜನು ಶ್ರೀ ವಿಷ್ಣುಚಿತ್ತರ ಭಕ್ತಿ ಮತ್ತು ಜ್ಞಾನದ ಪ್ರಭಾವವನ್ನು ಅರಿತವನಾದುದರಿಂದ ವಿದ್ವಾಂಸರ ಆಕ್ಷೇಪಣೆಗಳಿಗೆ ಕಿವಿಗೊಡಲಿಲ್ಲ. ಶ್ರೀ ವಿಷ್ಣುಚಿತ್ತರು ಸಭೆಯಲ್ಲಿ ವಾದಿ

ಸುತ್ತಾ ತಮ್ಮ ಅನೋಘವಾದ ಜ್ಞಾನವನ್ನು ಪ್ರದರ್ಶಿಸಿ, ಸಭಿಕರನ್ನು ಬೆರಗುಗೊಳಿಸಿದರು. ಭಗವಂತನು ಮಾಯಾತೀತನು, ಆದ್ಯಂತರಹಿತನು, ಮತ್ತು ಸರ್ವ ಶಕ್ತನೆಂಬುದನ್ನು ನಿರೂಪಿಸಿದರು.

ಶ್ರೀ ವೈಷ್ಣವಮತದ ಮಹಿಮೆಯನ್ನು ಎತ್ತಿತೋರಿಸಿ ಶ್ರೀಮನ್ನಾರಾಯಣನೇ ಸೃಷ್ಟಿಗೆ ಕಾರಣನಾದ ಪರಮಾತ್ಮನೆಂದೂ ಮತ್ತು ಅವನನ್ನು ಶರಣುಹೋಗುವುದೇ ಸಕಲಾಭೀಷ್ಟಗಳನ್ನೂ ನೆರವೇರಿಸಿಕೊಳ್ಳುವ ಉಪಾಯ ವೆಂದೂ ತಿಳಿಸಿದರು.

ಶ್ರೀ ವಿಷ್ಣುಚಿತ್ತರ ಅಪಾರವಾದ ಜ್ಞಾನ, ಭಕ್ತಿ ವೈರಾಗ್ಯಗಳಿಗಾಗಿ, ಸಭಿಕರೆಲ್ಲರೂ ತಲೆದೂಗಿದರು. ಅವರಿಗೆ ಅನೇಕ ಬಿರುದಾವಳಿಗಳನ್ನು ಕೊಟ್ಟು ಅವರನ್ನು ಪಟ್ಟದ ಆನೆಯ ಮೇಲೆ ಕೂರಿಸಿ, ನಗರದ ಬೀದಿಗಳಲ್ಲಿ ವೈಭವದೊಡ್ಡನೆ ಮೆರವಣಿಗೆಯನ್ನು ಮಾಡಿಸಿದರು. ಆನೆಯ ಮೇಲೆ ಕುಳಿತು ಮೆರವಣಿಗೆಯಲ್ಲಿ ಬರುತ್ತಿರುವ ಸಮಯದಲ್ಲಿ, ಶ್ರೀ ವಿಷ್ಣುಚಿತ್ತರಿಗೆ ಭಗವಂತನ ಸಂದರ್ಶನವಾಯಿತು. ಕೂಡಲೇ ಅವರ ಪ್ರೇಮವು ಉಕ್ಕಿ ಹರಿಯಿತು. ಭಗವಂತನು ತನಗೆ ರಕ್ಷಕನೆಂಬ ಭಾವನೆಯು ಮರೆಯಾಯಿತು. ಅದಕ್ಕೆ ಪ್ರತಿಯಾಗಿ ಸುಕುಮಾರನಾದ ಪುತ್ರನಲ್ಲಿ ತಾಯಿಯು ತೋರುವಪ್ರೇಮದ ರೀತಿಯಲ್ಲಿ ಅವರ ಭಕ್ತಿಯು ಪರಿವರ್ತನೆಯನ್ನು ಹೊಂದಿತು. ತನ್ನ ಪುತ್ರನಿಗೆ ಯಾವ ಅಪಾಯವೂ ಸಂಭವಿಸಬಾರದೆಂದು ಇಚ್ಛಿಸುವ ತಾಯಿಯಂತೆ, ವಿಷ್ಣುಚಿತ್ತರು ಮರ್ತ್ಯ ಲೋಕದಲ್ಲಿ ಪಾಪಿಗಳಾದ ಈ ಮನುಷ್ಯರ ದೃಷ್ಟಿಗೆ ಗೋಚರಿಸುತ್ತಿರುವ ಈ ಸ್ವಾಮಿಗೆ ಮನುಷ್ಯರ ದೃಷ್ಟಿಯ ಕಾರಣ ಯಾವ ವಿಧವಾದ ಕೆಡುಕೂ ಉಂಟಾಗಬಾರದೆಂದು ಕೋರಿದರು. ಕೂಡಲೇ, "ನಿನಗೆ ಚಿರಕಾಲವೂ ಮಂಗಳವುಂಟಾಗಲೀ" ಎಂದು ಹರಸಿದರು. ಕೆಂದಾವರೆಯನ್ನು ಹೋಲುತ್ತಿದ್ದ ಅವನ ಪಾದಗಳಿಗೆ ರಕ್ಷೆಯಿಟ್ಟರು. ಅವನ ವಕ್ಷಸ್ಥಲ ನಿವಾಸಿನಿಯಾದ ಲಕ್ಷ್ಮೀದೇವಿಗೂ ಮತ್ತು ಅವನ ಸಕಲಾಯುಧಗಳಿಗೂ ಮಂಗಳವನ್ನು ಕೋರಿದರು. ಸುಕುಮಾರನಾದ ಸ್ವಾಮಿಗೆ ಮಂಗಳವನ್ನು ಕೋರಿ ಉದ್ಧಾರ ಹೊಂದಬೇಕಾಗಿ ಸಕಲರನ್ನೂ ಕರೆದರು.

ಹೀಗೆ ಪಾಂಡ್ಯರಾಜನ ಸಭೆಯಲ್ಲಿ ಸಕಲ ಮರ್ಯಾದೆಗಳನ್ನೂ ಹೊಂದಿ ಶ್ರೀ ವಿಲ್ಲಿಪುತ್ತೂರಿಗೆ ಹಿಂತಿರುಗಿದರು. ಪಾಂಡ್ಯರಾಜನಿಂದ ಬಹುಮಾನವಾಗಿ ಕೊಡಲ್ಪಟ್ಟಿದ್ದ ಧನದಿಂದ ವಟಪತ್ರಶಾಯಿಯ ಮಂದಿರಕ್ಕೆ ಗೋಪುರವನ್ನು ಕಟ್ಟಿಸಿದರು

ಭಕ್ತಿಯ ವಿವಿಧ ರೂಪಗಳಲ್ಲಿ ಒಂದಾದ ವಾತ್ಸಲ್ಯ ಭಾವವೇ ಶ್ರೀ ವಿಷ್ಣುಚಿತ್ತರ ಮನದಲ್ಲಿ ಉಕ್ಕಿಹರಿಯುತ್ತಿದ್ದಿತು ಮತ್ತು ಅದು "ತಿರುಮೊಳಿ" ಎಂಬ ಗ್ರಂಥದ ರೂಪದಲ್ಲಿ ಹೊರಟಿತು. ತಮ್ಮನ್ನು ಯಶೋದೆಯನ್ನಾಗಿಯೂ, ಪರಮಾತ್ಮನನ್ನು ಬಾಲಕೃಷ್ಣನನ್ನಾಗಿಯೂ ಭಾವಿಸಿ ಶ್ರೀ ಕೃಷ್ಣನ ಬಾಲಲೀಲೆಗಳನ್ನೆಲ್ಲಾ 440 ಪದ್ಯಗಳನ್ನುಳ್ಳ ಈ ಗ್ರಂಥದಲ್ಲಿ ಕ್ರಮವಾಗಿ ವರ್ಣಿಸಿರುವರು.

(ಮುಂದುವರಿಯುವುದು)



ಮಕ್ಕಳ ಕಿರುಗತೆ: ೧

# ತಾಯಿ ಇಲ್ಲದ ಕರು

ಲೇಖಕ :

## ಸಿ. ವಿಜಯಕುಮಾರ್

ನಿಶಾದೇವಿಯ ಸ್ವರೂಪ ಅಮಾವಾಸ್ಯೆಯ ಅರ್ಧ ರಾತ್ರಿಯಲ್ಲಿ ನೋಡಬೇಕು. ಆಗ ಅವಳ ನೋಟಕ್ಕೆ ಯಾರು ಬೆದರುವುದಿಲ್ಲವೋ ಅವರೇ ಧೀರರು.

ಊರ ಹೊರಗಿನ ಒಂದು ಚಿಕ್ಕಮನೆ. ಗುಡಿಸಲಾದರೋ ಮಳೆಯ ನೀರು ಸೋರದಂತ ಗಟ್ಟಿ-ಮುಟ್ಟಾಗಿ ಇದ್ದೀತು. ಪ್ರತಿಯೊಂದು ನಕ್ಷತ್ರಗಳೂ ಆ ಮನೆಯ ಒಳಭಾಗವನ್ನು ಪ್ರವೇಶಿಸಿ, ತಾಯಿ-ಮಕ್ಕಳ ಮುಖಗಳನ್ನು ತೋರಿಸುತ್ತಿದ್ದವು.

ಬಡತನದಿಂದ ಜರ್ಜರಿತಳಾದ, ಮರಣಾಸತ್ತ ತಾಯಿ ತನ್ನ ಎಳೆ ಕಂದಮ್ಮನ ಹಸಿವಿನ ಗೋಳನ್ನು ಕೇಳಲಾರದೆ ಹಾಸಿಗೆಯಲ್ಲಿ ಉರುಳಾಡುತ್ತಿದ್ದಳು ಆ ಮಗು ಹಸಿವಿನ ತಾಪವನ್ನು ಸಹಿಸಲಾರದೆ ಕೊರಗುತ್ತಿತ್ತು.

ನರಿಗಳ ಕೂಗಾಟ, ಪಕ್ಷಿಗಳ ಹಾರಾಟದಿಂದ ಪ್ರಕೃತಿಯ ಶಾಂತತೆಗೆ ಆಗಾಗ ಭಂಗ ಬರುತ್ತಿತ್ತು. ಹುಲಿಯ ಗರ್ಜನೆ-ಅಮಲೇರಿದ ಮನುಷ್ಯನ ಹಾಡುಗಾರಿಕೆ ಒಂದೇ ಆಗಿತ್ತು. ಸಂಗೀತ ಆಗ ಮನುಷ್ಯನನ್ನು ಮರಣಲೋಕಕ್ಕೆ ಕೊಂಡೊಯ್ಯುವಂತಿತ್ತು.

ಮೊದಲೇ ಅರ್ಧ ಮೃತಾವಸ್ಥೆಯಲ್ಲಿ ಮಲಗಿದಂತಾಗಿತ್ತು ಆ ಮಗು. ಅಂತಹುದರಲ್ಲಿ ತನ್ನ ಮನೆಯ ಕಳಶದ ಮೇಲೆಯೇ "ಘುರ್, ಘುರ್" ಎಂದು ಒಂದು ಪಕ್ಷಿ ದನಿ ತೆಗೆಯಬೇಕೆ?

ಆ ದನಿಗೆ ತಾಯ ಮಡಿಲನ್ನು ಸೇರಿತು ಮಗು. ತಾಯ ಕಣ್ಣೀರ ಹನಿಗಳೇ ಆ ಮಗುವಿನ ಅಭಿಷೇಕ ಗಂಗಾಜಲವಾದವು.

"ಅಮ್ಮಾ, ಏನು ಹೇಳುತ್ತಿದೆಯಮ್ಮಾ ಆ ಕೋಗಿಲೆ?" ಸಣ್ಣ ಹುಡುಗ ಒಮ್ಮೊಮ್ಮೆ ಕೋಗಿಲೆಯ 'ಕುಹೂ ಕುಹೂ' ಕೇಳಿತ್ತು; ಆ ಪಕ್ಷಿಯನ್ನಾಧರಿಸಿ ತಾಯಿ ತರತರದ ಕಥೆಗಳನ್ನು ಹೇಳುತ್ತಿದ್ದಳು.

''ಮಗೂ ಇದು ಯಮಲೋಕದಿಂದ ಬಂದ ಕೋಗಿಲೆ. ನಾನು ದೇವಲೋಕಕ್ಕೆ ಹೋಗುವ ಕಾಲ ಸನ್ನಿಹಿತವಾಗಿದೆ ಎಂದು ತಿಳಿಸಲು ಬಂದಿದೆ" ಎಂದು ಹೇಳಿದಳು ತಾಯಿ.

ಯಮಲೋಕ-ದೇವಲೋಕ ಯಾವುದೂ ತಿಳಿಯದ ಆ ಮೂಢ ಮಗು ಮತ್ತಷ್ಟು ಕುತೂಹಲದಿಂದ ಕೇಳಿತು. ''ನಾನೂ ನಿನ್ನ ಜತೆಗೆ ಬರಲೇನಮ್ಮಾ?"

ಸಾವಿನ ದಾರುಣ ಅವಸ್ಥೆಯಲ್ಲಿಯೂ ನಗೆಬಂದಿತವಳಿಗೆ, ''ನೀನೂ ಒಂದಿನ ಬರಬೇಕಾಗುತ್ತಪ್ಪ ಮಗಾ. ಆ ಸಿದ್ಧತೆ ನೀನು ಈಗಿನಿಂದಲೇ ಮಾಡಿಕೊಳ್ಳಬೇಕು."

''ಬೆಳಗಾಗುವುದರೊಳಗೆ ನಾನು ಸಿದ್ಧನಾಗ್ತೀನಿ ಅಮ್ಮಾ."

''ಒಂದೇ ಬೆಳಗಿನಲ್ಲಿ ಬೆಳಕು ಕಾಣೋದಿಲ್ಲ ಮಗಾ. ಒಂದು ನಿಮಿಷ ಕಣ ನೀನು ನೋಡಬೇಕಾದರೆ ಇಡೀ ಆಯುಷ್ಯ ಗಂಧದಂತೆ ತೇಯಬೇಕು."

ತನ್ನ ತಾಯಿ ದೇವಪೂಜೆಗಾಗಿ ಪ್ರತಿದಿನವೂ ಗಂಧ ತೀಡುವುದನ್ನು ನೋಡುತ್ತಿತ್ತು ಆ ಮಗು. ಅದೇ ಜ್ಞಾಪಕ ಬಂದಿತು.

'ನಿನ್ನ ನ್ಹಾಂಗೆ ನಾನೂ ದಿನಾ ಗಂಧಾ ತೀದು ಪೂಜೆ ಮಾಡ್ತೀನಿ'

''ಹೌದು ಮರಿ. ಇನ್ನು ನೀನೇ ಪೂಜೆ ಮಾಡಬೇಕು. ಸಂಸಾರದ ವಸ್ತುಗಳನ್ನೆಲ್ಲ ಕಳೆದು ಮನಸ್ಸು ಶೂನ್ಯವಾದಾಗ ಪೂಜೆ ಆಗುತ್ತದೆ. ಅದನ್ನು ನೀನು ಕಲೀಬೇಕಪ್ಪ".

"ಅದು ಹ್ಯಾಗೆ ಅಮ್ಮಾ?"

"ಬಾಲಯೋಗಿ ವಿವೇಕಾನಂದರಂತೆ!"

ಮತ್ತಷ್ಟು ಜಿಜ್ಞಾಸೆ ಆ ಮಗುವಿಗೆ. ಆದರೆ ಮಾತನಾಡಲು ಶಕ್ತಿ ಸಾಲದು ತಾಯಿಗೆ

ನಾಲಿಗೆ ಎಳೆಯುತ್ತಿದೆ; ಬಾಯಲ್ಲಿ ಜೊಲ್ಲು ತುಂಬುತ್ತಿದೆ; ಕಣ್ಣುಗಳು ಕಾಂತಿಹೀನವಾಗುತ್ತಿವೆ. ಆಗಸದಿಂದ ಕ್ಷಣಕ್ಷಣಕ್ಕೂ ದೇವನ ಕರೆಯ ಕೂಗು ಕೇಳಿಬರುತ್ತಿದೆ.

"ಸ್ವಾಮಿ ವಿವೇಕಾನಂದರ ಪಾಠ ನನಗೂ ಗುರುಗಳು ಹೇಳುತ್ತಿರುತ್ತಾರಮ್ಮಾ" ಎಂದಿತು ಕೊನೆಯಲ್ಲಿ ಆ ಮಗು.

"ಬರೀ ಪಾಠಕಲಿತರೆ ಸಾಲದು ಮಗೂ. ದೇಶ........ ಸೇವೆಗಾಗಿ...........ಸ.....ತ್ಯನಿಷ್ಠೆ..... ...... ಯಿಂದ .............. ದುಡಿದು... ......ನೀ.. ..ವಿ......ವೇ .....ಕಾ......ನಂದ...........!"

ಆಕಾಶದಿಂದ ತಾರೆಯೊಂದು ಬೀಳುತ್ತಿರುವುದನ್ನೂ ಪಕ್ಷಿ ಹಾರಿಹೋಗುತ್ತಿರುವುದನ್ನೂ ನೋಡಿದ ಆ ಮಗು ತಾಯಿಗೆ ಹೇಳುತ್ತಲಿತ್ತು.

ಹಿತ್ತಲಲ್ಲಿಯ ಕರು ಆಕಳ ಮೊಲೆಗೆ ಬಾಯಿ ಹಾಕುತ್ತಲಿತ್ತು. ಎಷ್ಟು ಸೆಳೆದರೂ ಹಾಲೇಬರುತ್ತಿರಲಿಲ್ಲ,

ಮಗು ಬಡಿಬಡಿಸುತ್ತಲೇ ಇತ್ತು "ನಾನೂ ವಿವೇಕಾನಂದನಾಗುವೆ! ನಾನೂ ವಿವೇಕಾನಂದನಾಗುವೆ! ನಾನೂ ವಿವೇಕಾನಂದನಾಗುವೆ !"

ಕರುವಿನ "ಅಂಬಾ" ಮಗುವಿನ "ಅಮ್ಮಾ" ದನಿ ಒಂದೇ ಆಗಿತ್ತು.

# ಭಾರತರತ್ನ ಲಾಲ್ ಬಹದ್ದೂರ್ ಶಾಸ್ತ್ರಿ

ಲೇಖಕ : ಬಿ ಶಿವಲಿಂಗಯ್ಯ, ಬಿ.ಎ.,

ಪ್ರಪಂಚದ ಇತಿಹಾಸದಲ್ಲಿ ಶಾಸ್ತ್ರಿಯವರ ಹೆಸರು ಅಮರವಾಗಿದೆ. ಭಾರತ ಅಂತಹ ನಾಯಕನನ್ನು ಪಡೆದದ್ದು ನಮ್ಮೆಲ್ಲರ ಅದೃಷ್ಟ. ಯಾವ ಮಾನವ ಶಾಂತಿಗಾಗಿ ಹೋರಾಡುತ್ತಿದ್ದನೋ ಅವನೆ ಇಂದು ಇಲ್ಲವಾಗಿದೆ. ಶಾಸ್ತ್ರೀಜಿಯವರಿಗೆ 61 ವರ್ಷ ವಯಸ್ಸಾಗಿತ್ತು. 1964ರ ಜುಲೆ ತಿಂಗಳಿಂದ ಅವರು ಭಾರತದ ಪ್ರಧಾನ ಮಂತ್ರಿಯಾದರು. ಅವರ ಹತ್ತೊಂಬತ್ತು ತಿಂಗಳ ನಾಯಕತ್ವದಲ್ಲಿ ಭಾರತ ಎದುರಿಸಬೇಕಾಗಿ ಬಂದ ಕೆಲವು ಜಟಿಲ ಸಮಸ್ಯೆಗಳ ಪರಿಹಾರಕ್ಕೆ ಸಾರ್ಥಕ ರೀತಿಯಲ್ಲಿ ವ್ಯವಹರಿಸಿ ಮಹಾನಾಯಕನೆಂದು ಹೆಸರು ಗಳಿಸಿದರು. ಅವರು ಶಾಂತಿಗಾಗಿ ಹೋರಾಡಿದರು. ಆದರೆ ಅದರ ಫಲವನ್ನು ಅನುಭವಿಸಲಿಕ್ಕೆ ಅವರು ಇರಲಿಲ್ಲ. ಅವರು ಕರ್ಮಯೋಗಿ. ಸರಳತನದಿಂದ ಮಹಾನಾಯಕನ ಪದವಿಗೇರಿದರು 1912ರ ಮುಂಚೆ ಚಹವನ್ನು ಸಹ ಕುಡಿಯುತ್ತಿರಲಿಲ್ಲ. ಶಾಸ್ತ್ರೀಜಿಯವರು ನಿಷ್ಪಕ್ಷಪಾತಿಗಳು, ಜಾತ್ಯಾತೀತರು. ಅವರಿಗೆ ಪ್ರಪಂಚವೇ ಗೌರವ ಸಲ್ಲಿಸುತ್ತಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ಅವರ ಸಕ್ರಿಯ ಪಾತ್ರ, ಸೆರೆಮನೆಯ ವಾಸ, ಕಾಂಗ್ರೆಸ್‌ನಲ್ಲಿ ವಿವಿಧ ಅಧಿಕಾರಿಗಳಾಗಿ ಕಾರ್ಯ ನಿರ್ವಹಣೆ ಮತ್ತು ಅಂತರ ರಾಷ್ಟ್ರೀಯ ಮುಖಂಡತ್ವ ಇವುಗಳಿಂದಾಗಿ ಅತ್ಯುನ್ನತ ಸ್ಥಾನಕ್ಕೆ ಸೇರಿದರು ನಾಯಕ ಜವಹರಲಾಲರ ಭವ್ಯ ಸಂಪ್ರದಾಯದಲ್ಲಿ ಅವರು ವಿಶ್ವ ಶಾಂತಿಗಾಗಿ ಹೋರಾಡಿದರು.

ಶಾಸ್ತ್ರಿಯವರ ಆಕಸ್ಮಿಕ ಮರಣದಿಂದ ಮಾನವ ಜನಾಂಗದ ಶಾಂತಿ ಮತ್ತು ಪ್ರಗತಿಯ ಆಶೋತ್ತರಗಳಿಗೆ ಪೆಟ್ಟುಬಿದ್ದಿದೆ. ಶಾಸ್ತ್ರಿಯವರು ಇಲ್ಲದೆ ಪ್ರಪಂಚ ಚಿಕ್ಕದಾಗಿ ಕಾಣುತ್ತಿದೆ ನಮ್ಮ ಭಾರತಕ್ಕೆ ತುಂಬಲಾರದಷ್ಟು ನಷ್ಟ ಉಂಟಾಗಿದೆ. ಉನ್ನತ ಅಧಿಕಾರದ ಹೊಣೆಯಿದ ಎಂದೂ ಜಂಬ ಪಟ್ಟವರಲ್ಲ. ನೆಹರೂ ಅನಂತರ ರಾಷ್ಟ್ರದಲ್ಲಿ ಅತ್ಯುತ್ತಮ ಪ್ರಧಾನ ಮಂತ್ರಿಗಳಾದರು; ಸಾಮಾನ್ಯತೆಯಿಂದ ಸಾರ್ಥಕ ಜೀವನದ ಅಸಾಮಾನ್ಯತೆಯನ್ನು ಏರಿದರು ನಮ್ಮ ಲಾಲ್‌ಬಹಾದ್ದೂರರವರು. ಪ್ರಾಮಾಣಿಕ, ನಿಸ್ಪೃಹ, ಮಹಾಮಾನವ, ನಿಷ್ಠಾವಂತ ಪ್ರಜಾಸೇವಕ ಶಾಂತಿ ದೂತ ಶಾಸ್ತ್ರಿಯವರಿಗೆ ಜನತ್ತು ಶ್ರದ್ಧಾಂಜಲಿಯನ್ನು ಅರ್ಪಿಸಿತು.

ಶಾಸ್ತ್ರಿಯವರ ಮನಸ್ಸು ಕುಸುಮಕ್ಕಿಂತ ಕೋಮಲ. ವಜ್ರಕ್ಕಿಂತ ಕಠಿಣ ಜನಕೋಟಿಯ ಮನವನ್ನು ಆಕರ್ಷಿಸಿದ್ದ ವ್ಯಕ್ತಿಯಾಗಿದ್ದರು ನಮ್ಮ ಶಾಸ್ತ್ರಿಯವರು. ಜನತೆಯ ನಡುವೆ ಹುಟ್ಟಿ ಜನರ ನಡುವೆಯೇ ಬಾಳಿ, ಜನಗಳಿಗಾಗಿಯೇ ಪ್ರಾಣತೆತ್ತ ಶಾಸ್ತ್ರಿಯವರು ಇನ್ನು ಈ ಲೋಕದಲ್ಲಿ ಇಲ್ಲ.

ನಾಡಿನ ಮನೋಧರ್ಮವನ್ನು ನವಿರು ನವಿರಾಗಿ ಅರಿತ ಜನ-ಮಾನವ ಶ್ರಿ ಶಾಸ್ತ್ರಿಯವರು. ಆಕ್ರಮಣಕ್ಕೆ ಮಣಿಯದೆ, ಅನ್ಯಾಯಕ್ಕೆ ಶರಣಾಗದೆ, ಗೌರವಯುತ ಶಾಂತಿಯನ್ನು ಅರಸಿ ಅರಿಸಿದ ಆತ್ಮಾಭಿಮಾನಿ ಶ್ರೀ ಶಾಸ್ತ್ರಿಯವರು ಇಂದು ಇಲ್ಲ.

ಶ್ರೀ ಲಾಲ್‌ಬಹದ್ದೂರ್‌ರವರು ರೈಲ್ವೆ ಸಚಿವರಾಗಿ, ವಾಣಿಜ್ಯ ಮಂತ್ರಿಯಾಗಿ, ಗೃಹಶಾಖಾ ಸಚಿವರಾಗಿ,

ಖಾತೆಯರಹಿತ ಸಚಿವರಾಗಿ, ಅನಂತರ ಭಾರತದ ಪ್ರಧಾನಿಯಾದರು. ಆಹಾರ ಅಭಾವವಿರಬಹುದು, ಆರ್ಥಿಕ ಸಂಕಟವಿರಬಹುದು, ರಾಜಕೀಯ ಕಿತ್ತಾಟಗಳಿರಬಹುದು. ಆದರೆ ಸಂಕಟ ಸಮಯದಲ್ಲಿ ರಾಷ್ಟ್ರ ರಥವನ್ನು ಸರಿಯಾಗಿ ಗುರಿಮುಟ್ಟಿಸುವ ಸಾಹಸಿಯ ಅಭಾವ ನಮಗೆ ಎಂದೂ ಇರಲಿಲ್ಲ. ಭಾರತಮಾತೆ ಬಂಜೆಯಲ್ಲ. ಶಾಸ್ತ್ರಿಯವರ ಜೀವನ ಸಾರ್ಥಕ. ಅವರ ಮರಣ ಅಕಾಲಿಕ; ಆದರೆ ಅರ್ಥಪೂರ್ಣ.

ಭಾರತ ಪಾಕಿಸ್ತಾನಗಳ ನಡುವಣ ವಿವಾದಕ್ಕೆ ಬಲಪ್ರಯೋಗ ವರ್ಜಿಸಲು ಜನವರಿ ಹತ್ತರಂದು ತಾಷ್ಕೆಂಟ್‌ನಲ್ಲಿ ಪ್ರತಿಜ್ಞೆ ಸ್ವೀಕರಿಸಿದರು. ಜಗತ್ತಿನ ಕಣ್ಣನ್ನು ತೆರೆಸಿದ ಕದನ ಅನಂತರ ಕಣ್ಣನ್ನು ಅರಳಿಸಿತು. ಶಾಸ್ತ್ರಿಜಿಯವರು ತಾಷ್ಕೆಂಟ್‌ನಲ್ಲಿ ಪ್ರತಿಜ್ಞೆ ಸ್ವೀಕರಿಸಿದ ನಂತರ ಭಾರತಕ್ಕೆ ಹೊರಡುವ ಮುನ್ನ 1 ಗಂಟೆ 25 ನಿಮಿಷ ಪ್ರಾತಃಕಾಲ ಹೃದಯಾಘಾತಕ್ಕೆ ಬಲಿಯಾದರು. ಶಾಸ್ತ್ರಿಜಿಯವರು ಕೊನೆಯದಾಗಿ, "ಹಾಯ್ ಬಾಪ್, ಹಾಯ್ ರಾಂ" ಎಂದು ನುಡಿದು ಕೊನೆಯುಸಿರೆಳೆದರು. ಭಾರತ ರತ್ನ ಶ್ರೀ ಶಾಸ್ತ್ರಿಯವರು ಇಂದು ಅಮರರಾಗಿದ್ದಾರೆ. ಅವರ ನಾಮಾಂಕಿತ ಆಚಂದ್ರಾರ್ಕವಾಗಿ ಇತಿಹಾಸದಲ್ಲಿ ಉಳಿಯಲಿ ಎಂದು ಹಾರೈಸೋಣ.



# ಕವಿಯಾದಾಗ...

ಲೇಕ್ಕಣಿಕೆಯನು ತೆಗೆದೆ
ನನ್ನೆದೆಯನೇ ಇರಿದೆ
ಬರೆದೆ ಬರೆದೆ
ಇಲ್ಲಿದ್ದ ನೋವು ನಲಿವುಗಳನ್ನು
ಹೊರಗೆ ಸುರಿದೆ
ಅಲ್ಲಿರುವ ಹೆಬ್ಬಾರಿ
ಎಂದಿನಿಂದಿಹುದೋ
ಇಂದದರ ಅಮ್ದಾರಿ
ಬಿರುಕು ಬಿಟ್ಟಿಹುದೋ
ಬರಿಗಾಲು ಸಾಗುತಿದೆ
ಪಾದರಕ್ಷೆಯು ಸವೆದು
ಮುಳ್ಳು ಕಲ್ಗಳ ಮೇಲೆ ನಡೆದು ನಡೆದು
ಅನ್ಯಾಯ ನಿಷ್ಕರುಣೆ
ಮೇಲು ಕೀಳುಗಳಲ್ಲಿ
ಮುಳ್ಳಾಗಿ ನೆತ್ತರನು ಉಕ್ಕಿಸಿರಲು
ಹಗಲಿರುಳು ಯಾತನೆಗೆ ಸಿಕ್ಕಿಸಿರಲು
ಅಂತರ್ಯವೇ ಬಾಧೆ
ಅಂತರ್ಯವೇ ಬೋಧೆ
ಏಕೆ ಹುಟ್ಟಿತೊ ಏನೊ ಅಂತರಂಗ
ಸುಟ್ಟು ಹೋದರು ಒಲುಮೆ
ಹುಟ್ಟುವುದು ಮತ್ತೊಮ್ಮೆ

ಹುಲ್ಲು ಚಿಗುರುವ ತೆರದೆ ಮೈದಾನದಲ್ಲಿ
ಬದುಕಿನಾ ಬಳ್ಳಿಗೇ ಭಾರವಾಗಿದೆ ಭಾವ
ಹಣ್ಣೆ ಆಗದು ಇನ್ನು ಏಕೊ ಕಾಣೆ
ಅತ್ತ ಶಾಂತಿಯ ಮೊಳಗು
ಇತ್ತ ಭ್ರಾಂತಿಯ ಕೂಗು
ಸಮಚಿತ್ತ ದೀಪವದು ಗಾಳಿಯಲ್ಲಿ
ಎಣ್ಣೆ ಬತ್ತಿಯ ನೇಹ
ದೀಪಕ್ಕೆ ದೇಹ
ಎಣ್ಣೆ ದೀಪಗಳಲ್ಲಿ ಶ್ರಮಿಸಿರಲು ಕರ್ಮಯೋಗ
ಉರಿದುರಿದು ಕುಲುಮೆಯಲಿ
ಬರಿ ಬೂದಿಯಾಗುವಾ
ಇದ್ದಲಿನ ತ್ಯಾಗವನು ಅರಿಯಬೇಕು
ಹೊಚ್ಚ ಹೊಸ ಜನುಮದಿಂ
ಹೊಳಪಿಟ್ಟು ಹೊರಬರುವ
ಚಿನ್ನ ತನ್ನಯ ಮದವ ತೊರೆಯಬೇಕು
ನೋವುಗಳ ಸಂದೇಶ
ನಲವಿಗಾಗಿ
ಅಳುವಿನಾ ಸಂದೇಶ
ಒಲವಿಗಾಗಿ
ಇಂತೆಂದು ಬರೆದ ಕವಿ
ಅವನೆ ಲೋಕಾನುಭವಿ.

—ಟಿ ವಿ. ಮುತ್ತಾಚಾರ್ಯ

## ಸಾಹಿತ್ಯ ಸಮೀಕ್ಷೆ:

# ಹೃದಯತರಂಗ

ಕವಿ : "ಪುಲಿಕೇಶಿ"
ಪ್ರಕಾಶಕರು : ವಾಗ್ವಿಲಾಸ ಪ್ರಕಾಶನ
2317-ಎ, 2ನೇ ಸ್ಟೇಜ್,
ರಾಜಾಜಿನಗರ, ಬೆಂಗಳೂರು-10.
ಬೆಲೆ : 1=00

ಮಕ್ಕಳು ಮಣ್ಣಿನ ಕುಡಿಕೆ, ಡಬ್ಬದ ಮುಚ್ಚಳ ಇಟ್ಟುಕೊಂಡು ಒಂದು ನಿಮಿಷದಲ್ಲಿ ಲಾಡು-ಚಿರೋಟಿ ಮಾಡಿ ಬಡಿಸುತ್ತವೆ. ಬೆಳೆದವರ ಕಣ್ಣಿಗೆ ಅದು ಬರೀ ಮಕ್ಕಳಾಟವಾಗಿ ತೋರಿದರೂ, ಮಕ್ಕಳ ಮನೋರಾಜ್ಯದಲ್ಲಿ ಅವು ನಿಜವಾದ ಲಾಡು ಚಿರೋಟಿಗಳೇ. ಇದು ಮಕ್ಕಳಾಗಿರುವಾಗ ಮಾತ್ರ ಸವಿಯುವಂತ ನಿರ್ಮಲವಾದ ಆನಂದ ಮಕ್ಕಳಂತೆ ಕವಿಯು ಸಹ ಕಲ್ಪನಾ ರಾಜ್ಯದ ಚಕ್ರವರ್ತಿ. ರಾಜ್ಯಭಂಡಾರಕ್ಕೆ ಬಡತನ ಬಂದರೂ ಕವಿಯ ಕಲ್ಪನಾ ಭಂಡಾರ ಬರಿದಾಗುವುದಿಲ್ಲ. ಆನಂದ ಸಾಮ್ರಾಜ್ಯದಲ್ಲಿ ವಿಹರಿಸುವ ಶಕ್ತಿ ಕವಿಗಳಿಗೆ ಸಹಜ. ಅಣುರೇಣುಗಳಲ್ಲಿ ಪರಮಾತ್ಮನ ಕೈವಾಡವನ್ನು ಗುರುತಿಸಿ ಸುಖಿಸಬಲ್ಲ ಕವಿಹೃದಯ ನಿಮಗೆ ದೈವದತ್ತವಾಗಿ ಬಂದಿದೆ ಜೊತೆಗೆ ಗುರುದೇವನ ಅನುಗ್ರಹ ನಿಮ್ಮನ್ನು ಸತ್ಯಶಿವಸುಂದರನ ಸಮೀಪಕ್ಕೆ ಕೈಹಿಡಿದು ನಡೆಸುತ್ತಿದೆ ಎಂಬುದಕ್ಕೆ ನಿಮ್ಮ "ಹೃದಯತರಂಗ" ಸಾಕ್ಷಿಯಾಗಿದೆ

ಇನ್ನು ಕಹಿ-ಸಿಹಿಗಳನ್ನು ಕೈಯೊಡ್ಡಿ ಕಬಳಿಸಿ ಜೀರ್ಣಿಸಿಕೊಳ್ಳುವ ಸಾಹಸಿಗಳಾದ ನಿಮ್ಮ ಮೇಲೆ ವಿಮರ್ಶೆಯ ಅಸ್ತ್ರ ಬಿಡುವುದು ವ್ಯರ್ಥ.

'ಗುರುದೇವ'ನ ಶ್ರೀ ಚರಣಸ್ಮರಣೆ ಮಾಡಿ ಹೃದಯ ವೀಣೆ ನುಡಿಸಿದ್ದೀರಿ, ತುಂಬುನಾದದ ನಿಮ್ಮ ಹೃದಯ ವೀಣೆಯನ್ನು ಕಾಣದ ಕೈಯೊಂದು ನುಡಿಸುತ್ತಾ, ನಾದ ಮಾಧುರ್ಯದಲ್ಲಿ ಜಗತ್ತನ್ನ ಮರೆಸಿದ್ದೆ. ಆ ನಾದ ತರಂಗದಲ್ಲಿ ಪಾಪ-ಪುಣ್ಯದ ಒಗಟು ಲೀನವಾಗಿ 'ಹೃದಯ ದೀಪ' ದೇದೀಪ್ಯಮಾನವಾಗಿ ಬೆಳಗಿದೆ ನಾದೋಪಾಸನೆಯಲ್ಲಿ ಗುರುವಿನ 'ಹಿತನುಡಿ' ಕೇಳಿಬರುತ್ತಿದೆ, 'ಮನದರಿಕೆ' ಗುರುದೇವನಿಗೆ ಸಲ್ಲುತ್ತಿದೆ, "ಮಹತೇಜದೇವ" ಜಗದೊಡೆಯನ ಕಲಾ ಕೌಶಲಕ್ಕೆ ಮನಸ್ಸು ಮಾರುಹೋಗಿದೆ. "ಅನ್ನಪೂರ್ಣೆ"ಯ ಅವತಾರವಾಗಿ ಪ್ರತಿಭಾರತೀಯನಿಗೂ ನುಡಿ-ಗಂಜಿಗಳು ದೊರೆತು ಸುಖ ಶಾಂತಿ ನೆಲೆಸಿದೆ, "ಪ್ರೇಮ" ವಿಶ್ವಪ್ರೇಮವಾಗಿ ಮೆರೆದಿದೆ, "ಒಗಟು" ವೈತಾಳಿ ಒಗಟಾಗಿಯೇ ಉಳಿದಿದೆ "ಪ್ರೇಮ ತ್ಯಾಗ ಮಧುರಮಿಲನ ಚಿರನೂತನವೆನಿಸುವ" ಸಿರೀಕ್ಷೆ ಸಫಲವಾಗಿ "ಒಳನಗು" ಬಂದಿದೆ. ಕೊನೆಯಲ್ಲಿ "ಭಾವನಾ" ತರಂಗವೆದ್ದು ಹೃದಯ ವೀಣೆಯ ನಾದ ಮಾಧುರ್ಯವನ್ನು ಚಿತ್ರಿಸಲು ಕೈಗೆ "ಲೇಖನಿ" ಹಿಡಿಸಿದೆ. ಯೋಗದಲ್ಲಿ ನೆಲೆ ಮುಟ್ಟಿಸಿದೆ.

"ಗುರುವಿಹನು ನೋಡಲ್ಲಿ
ಜ್ಯೋತಿತೆರೆದೊಳು ದೂರ
ಅವನತ್ತ ದಿಟ್ಟಿಸುತೆ ನೀ ಭಜಿಸು ಕರುಣಿಸಲು
ಶಿವಕುಮಾರ"

ನಿಮ್ಮ ಯಶಸ್ಸಿನ ರಹಸ್ಯ ಈ ಪದ್ಯದಲ್ಲಿ ಅಡಕವಾಗಿದೆ. ಸ್ವಾಮೀಜಿಯ ಶ್ರೀ ಚರಣಸ್ಮರಣೆ ನಿಮ್ಮ ದಾರಿದೀಪವಾಗಿ, ಬಾಳಬಂಡೆಗೆ ಅಪ್ಪಳಿಸಿ ಜೀವನ ನುಚ್ಚಾಗದಂತೆ ರಕ್ಷಿಸುತ್ತಿದೆ ಆ ಧೀಶಕ್ತಿ.

ನಿಮ್ಮಿಂದ ಇಂತಹ ಹತ್ತಾರು ಕೃತಿಗಳು ಬೆಳಕು ಕಾಣಲಿ ಎಂದು ಹಾರೈಸುವ

ಸೋದರಿ
—ಸ್ವರ್ಣ

# ಸೇವೆ

ಲೇಖಕ :
**ಅಚಲಶರಣ್**

ಆದರ್ಶ: ಧೂಪವದು ದೇವಮಾನವ ಸೇವೆಗೆಳಸಿ
ತನ್ನೆದೆಯ ಗಂಧದಣಿಗೆಯು ಸುತ್ತಸಲಿಸಿ
ಅಳಿಯುವುದು ತನ್ನ ಬದುಕಿನ ಗುರಿಯ ನಿಲುಕಿ
ಓಂ ತತ್ಸತ್
ತಮಸೋಮಾ ಜ್ಯೋತಿರ್ಗಮಯಂ
ಶೃಣ್ವಂತು ವಿಶ್ವೇ ಅಮೃತಸ್ಯಪುತ್ರಾ
ಈ ಬಯಕೆ ಈ ಸೇವೆ,
ಹೆಸರುಂಟೆ? ಹೇಳಬಲ್ಲವೆ? ಯಾರು ಮಾಡಿದ
ಸೇವೆ?
ಗಾಂಧಿ-ಹೌದಲ್ಲ, ನೀ ಬೇಡಿದೆ ದೇವನನು
"ಮುಂದಿನಾ ಜನುಮದಲ್ಲಿ ಕೀಳೆನಿಸಿದಾ ಕುಲ
ದೊಳಗೆ
ಜನುಮವನು ನೀಡು ತಂದೆ; ಅದು ಸಮರಸವಾಗೆ
ಸೇವೆ ನಡೆಸಲು ಬಿಡು ಮುಂದೆ ಮುಂದೆ"

ನುಡಿಸೇವೆ: ನೂರಾರುಬಾರಿಗೆ ಹೇಳುತಿದೆ ನಾಲಿಗೆ–
'ನಾ ಸೇವೆಗೆ'
ನಡೆದಿದೆಯೆ ಮಹಾತ್ಮನಾದರ್ಶದಾರಿಗೆ!
ಹಾಗಾದರಿಲ್ಲಿ ನಡೆಯಬಲ್ಲುದೆ ಈ ಗೋಜಿಗೆ!

ಪರಿತೋದರ್ಶನ: ಬಾ ಇಲ್ಲಿ ನೋಡು; ನೊಣ ಹೆತ್ತ
ಕಾಡು
ಸುತ್ತಮುತ್ತಲು ಮುತ್ತಿ ರೋಗರುಜಿನದ ಹಾಡ
ಎತ್ತಿ ಹಾಡಿರುವ ಕ್ರಿಮಿಗಳ ರಾಜಮೋದ.
ಬಾ ಇಲ್ಲಿ ನೋಡು,
ಮದ ನೆರೆದ ಗೂಡು.
ಪರರ ನೋವಿಗೆ ನಗುವ ಕೀಳುಮದ ಅಗಾಧ
ದುರಹಂಕಾರ ರಕ್ಕಸನ ಕೋರೆಹಲ್ಲಿನ ವಾದ್ಯ.
ಕೂಲಿಗಳಬೆವರ ನೀರನು ಕುದಿಸಿ ಸ್ವೇದ ಮೋದ;
ಕತ್ತಲೆಯ ಕರುಳಿನಲಿ ನಡೆಸುತಿದೆ ಗೂಗೆಗುಣಿತ.
ಬಾ ಇಲ್ಲಿ ನೋಡು;
ಮನೆ ಮುರುಕ ಕಾಡು.
ಅರ್ಥ ನೀಡುವೆನೆಂದು ಗಂಡು ಬೆಳೆಸಿದ ರುಜಿನ
ಹೆಣ್ಣಿನ ಕಾಡು;
ನೋವುಗಳ ಇಟ್ಟಿಗೆಯು ಜೋಡಿಸಿದ ಹೆಣ್ಬಾಳು
ಬೇಯ್ದ ಗೂಡು;
ನಡೆಯುತಿದೆ. ಅಲ್ಲಿ ನೂರು ವಿಟರುಗಳ ರಾಕಂ
ಡ್ರೋಲು ಕುಣಿತ;
ಸಿಫಲೀಸು ಗುಹ್ಯರೋಗಗಳ ವಿವಿಧ ವಿಕಟ
ಮರ್ಕಟ ನಗ್ನ ಗಣಿತ.
ನೋಡಿದೆಯ ಈ ಸಂತೆ? ಸಾಬೂನು ನೊರೆಯಂತೆ
ಮನಸು ಉಬ್ಬುತಿದೆ ಏನು, ಸೇವೆಗೆಳಸುವ ಚಿಂತೆ
ಯೊಳಗೆ?
ದೇಶ–ಈಶ ಬಡವ–ಬಲ್ಲಿದ! ದಯೆ–ದಾನ, ಸೇವೆ
ಯಂತೆ

ಯಾವುದಿದೆ ನಿನ್ನ ಮನಸಿನಾಳದೊಳಗೆ? ಹೇಳು
ಆ ಬಗೆ.
ಹೀಂಗೆ ಇವೆ ಸಾಲುಗಳು ಸಾಸಿರವೆ.
ಸೇವೆ ಮಾಡುತ ಬಂದಾ ಕುಲಜಗೆ,
ಕಾಲವೆಲ್ಲಿದೆ ಎಣಿಕೆಗೆ?

ಹಿನ್ನೋಟ-ಮುನ್ನೋಟ: ಜ ನು ಮ ಜನುಮಗಳು
ಸವೆದರೂ ಎಲ್ಲಿಯೂ
ನಿಂತಿಲ್ಲವೀ ಸೇವೆಗೊಂದು ಬಾಂದುಕಲ್ಲು.
ಜಗದ ಹುಟ್ಟಿನಲೆ ತುಂಬಿಕೊಂಡಿದೆ ಈ ಸೊಲ್ಲು.

ಡಾಂಬಿಕತೆಗೆ ಹೊನ್ನಿನಾ ಮುಖವಾಡ ತೊಡಿಸಿ,
ಜನಜಂಗುಳಿಯ ಮೆಚ್ಚುಗೆಯ ಗಳಿಸಿಕೊಂಡವ
ಬಾಳು ನೋಡು.
ದೀನ ದಲಿತರ, ಪತಿತ ಹತಿತರ, ಬದುಕ ಬಿಡಿಸಿ.
ನಾಡ ನೋವನು ಕಳೆದು ಲೇಸಮಾಡಿದ ಕು
ಜರನು ನೋಡು.
ನಾಡ ನೋವನು ಕಳೆದು ನಾಡಬೆಳಗುವ ಸೇವೆ,
ನಾಡಗುಡಿಯಲಿ ಹಚ್ಚಿಡುವ ದೀವಳಿಯ ದಿವ್ಯ
ಸೇವೆ.



# "ಸಿದ್ಧಗಂಗಾ"

ತ್ರೈಮಾಸಿಕ ಚಂದಾ ವಿವರ

**ಬಿಡಿ ಪತ್ರಿಕೆ: ರೂ. ೧=೨೫**

| | | |
|---|---|---|
| ವಾರ್ಷಿಕ ಚಂದಾ ಸಂಸ್ಥೆಗಳಿಗೆ ಮತ್ತು ವ್ಯಕ್ತಿಗಳಿಗೆ | 5—00 | ಅಂಚೆ ವೆಚ್ಚ ಸೇರಿ |
| ವಾರ್ಷಿಕ ಚಂದಾ ವಿದ್ಯಾರ್ಥಿಗಳಿಗೆ | 4—00 | ,, |

ಚಂದಾ ಹಣವನ್ನು :

ಪ್ರಕಾಶಕರು :

**ಹಳೆಯ ವಿದ್ಯಾರ್ಥಿ ಸಂಘ**

ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ

ಇವರಿಗೆ ಕಳುಹಿಸಬೇಕು.

ಪ್ರಕಟನೆಗೆ ಲೇಖನಗಳನ್ನೂ, ವಿಮರ್ಶೆಗೆ ಗ್ರಂಥಗಳನ್ನೂ, ವಿನಿಮಯಕ್ಕೆ ಪತ್ರಿಕೆಗಳನ್ನೂ

ಸಂಪಾದಕ :

"ಸಿದ್ಧಗಂಗಾ" (ತ್ರೈಮಾಸಿಕ)

ಹಳೆಯ ವಿದ್ಯಾರ್ಥಿ ಸಂಘ

ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ

ಇವರಿಗೆ ಕಳುಹಿಸಬೇಕು

Printed by T.B.Dharanendriah, at Prithvi Printers, Balepet, B'lore